

ರಾಜಒಡೆಯರು

# ರತ್ನಸಿಂಹಾಸನ

ಮ. ನರಸಿಂಹಮೂರ್ತಿ

ವಿ. ಜಿ. ಟಿ. ಜನರಲ್ ಏಜನ್ಸಿ
ಬಳೇಪೇಟೆ, ಬೆಂಗಳೂರು ನಗರ

# ಮುನ್ನುಡಿ

ತನ್ನ ದೇಶದ ಚರಿತ್ರೆಯನ್ನು ತಾನರಿಯದ ಜನಾಂಗವು ಮುಂದುವರಿಯುವುದು ಬಹುಕಷ್ಟ. ಹಿಂದಿನ ಸಂಶೋಧನೆಗಳ ಆಧಾರದ ಮೇಲೆ ವೈಜ್ಞಾನಿಕನು ಹೊಸ ಶೋಧನೆಗಳನ್ನು ನಡೆಸುವಂತೆ, ಗುರುವಿಂದ ಹಲವು ಮಧುರ ತಾನಗಳನ್ನು ಕಲಿತು ಗಾಯಕನು ಮಧುರತರ ತಾನಗಳನ್ನು ಕಲ್ಪಿಸುವಂತೆ, ಒಂದು ಜನಾಂಗವೂ ಹಿಂದೆ ಬಾಳಿದವರ ಆಶೆ ಪ್ರತ್ಯಾಶೆಗಳನ್ನು ಸಾವು ನೋವುಗಳನ್ನು ಜೀವನದ ಹೋರಾಟಗಳನ್ನು ಹಂತವಾಗಿಟ್ಟುಕೊಂಡು ತನ್ನ ಭವಿಷ್ಯವನ್ನು ಕಟ್ಟಬೇಕಾಗುತ್ತದೆ. ಹಿಂದಿನ ಅನುಭವವು ಮೂರ್ತಿವತ್ತಾಗಿ ಮುಂದೆ ನಿಂತು ದಾರಿಯನ್ನು ತೋರಿಸುವುದು ಅತಿ ವಿರಳ. ಸಾಮಾನ್ಯವಾಗಿ ಜನಾಂಗದ ಹೃದಯದಲ್ಲಿಯೇ ಹೊಕ್ಕು ಅದು ಕೆಲಸಮಾಡುತ್ತಿರುತ್ತದೆ. ಯಾವ ಜನಾಂಗದಲ್ಲಿ ಇತಿಹಾಸವು ಪರಿಪೂರ್ಣವಾಗಿದೆಯೋ ಯಾವ ಜನರ ಹೃದಯದಲ್ಲಿ ಎಳೆಯತನದಿಂದಲೂ ತಮ್ಮ ಹಿರಿಯರ ಕೀರ್ತಿಧ್ವಜವು ನೆಟ್ಟಿದೆಯೋ ಯಾವ ಜನಾಂಗವು ಹಿಂದೆ ಬಾಳಿದವರ ಸ್ಮರಣೆಯು ಪೂಜ್ಯವೆಂದು ಭಾವಿಸಿದೆಯೋ ಆ ಜನವು ಎಂದೆಂದಿಗೂ ಪ್ರಗತಿಪಥದಲ್ಲಿ ಚಲಿಸುವುದು. ಮರಳಿನಲ್ಲಿ ನಡೆಯುವವನು ತನ್ನ ಒಂದೊಂದು ಹೆಜ್ಜೆಯ ಗುರುತನ್ನೂ ಅದರಲ್ಲಿ ಬಿಡುವಂತೆ ಒಂದೊಂದು ತಲೆಮಾರಿನ ಜನರೂ ತಮ್ಮ ಬಾಳಿನ ಗುರುತೊಂದನ್ನು ಬಿಟ್ಟು ಹೋಗಿರುತ್ತಾರೆ. ಬಿರುಗಾಳಿ ಬಂದಂತೆ ಕಾಲವು ಬಂದು ಆ ಹೆಜ್ಜೆ ಗುರುತುಗಳನ್ನಳಿಸಿ ಹಿಂದೆ ಬರುವ ಜನರಿಗೆ ದಾರಿ ತಪ್ಪಿಸಿ ಕಾಡಿಗೊಯ್ಯಬಹುದು. ಜನಾಂಗವು ಹೀಗೆ ದಾರಿಗೆಡದಂತೆ ಮಾಡುವುದೇ ಇತಿಹಾಸದ ಮುಖ್ಯ ಕೆಲಸ.

ಇತಿಹಾಸವು ಲುಪ್ತವಾಗದಂತೆ ಮಾಡುವುದಕ್ಕೆ ಹಲವು ಸಾಧನಗಳಿವೆ. ಆ ಸಾಧನಗಳನ್ನೂ ಅವುಗಳ ಗುಣಾವಗುಣಗಳನ್ನೂ ಕುರಿತು ನಾನಿಲ್ಲಿ ಚರ್ಚಿಸಲು ಬಯಸುವುದಿಲ್ಲ. ಆದರೆ ಅವುಗಳಲ್ಲಿ ಒಂದೆರಡನ್ನು ಕುರಿತು ಇಲ್ಲಿ ಹೇಳಬೇಕಾಗಿದೆ. ಸಾಮಾನ್ಯವಾಗಿ ಎಲ್ಲ ಕಡೆಯಲ್ಲಿಯೂ ರೂಢಿಯಲ್ಲಿರುವಹಾಗೆ, ನಡೆದ ಮುಖ್ಯ ಸಂಗತಿಗಳನ್ನು ನಡೆದ ಹಾಗೆಯೆ ಬಣ್ಣಿಸುವುದು ಒಂದು ಮಾರ್ಗ. ಬಳಕೆಯಲ್ಲಿ ನಾವು ಇದನ್ನೇ ಇತಿಹಾಸ ಅಥವಾ ಚರಿತ್ರೆ ಎಂದು ಕರೆಯುವುದು. ಹೀಗೆ ಬರೆದಿಟ್ಟ ಇತಿಹಾಸದಿಂದ ಪ್ರಸ್ತುತ ಧ್ಯೇಯವು ಸಫಲವಾಗುವುದೆ ಇಲ್ಲವೆ ಅಥವಾ ಸಫಲವಾಗುವುದಾದರೆ ಎಷ್ಟು ಮಟ್ಟಿಗೆ ಆಗುವುದು ಎಂಬ ಚರ್ಚೆಯೂ ಇಲ್ಲಿ ಬೇಡ. ಸ್ಥೂಲವಾಗಿ ಹೇಳಬಹುದಾದರೆ ಇಂತಹ ಲೇಖನವು ಇತಿಹಾಸದೃಷ್ಟಿಯಿಂದ ಅತ್ಯವಶ್ಯಕವಾದುದು. ಆದರೆ ಇದಿಷ್ಟರಿಂದಲೇ ನಡೆಯುವ ಕೆಲಸವು ಸ್ವಲ್ಪ. ಚಿಕ್ಕವರು ದೊಡ್ಡವರನ್ನು, ಹೆಂಗಸರು ಮಕ್ಕಳನ್ನು ವಿವೇಕಿ ಅವಿವೇಕಿಗಳನ್ನು, ಸರ್ವರನ್ನೂ ತನ್ನ ಕಡೆಗೆ ಆಕರ್ಷಿಸಿ ತನ್ನ ಚಿತ್ರವನ್ನು ಅವರ ಹೃದಯದಲ್ಲಿ ನೆಟ್ಟು ಕೆಲಸ ಮಾಡಿಸುವ ಶಕ್ತಿ ಈ ತೆರದ ಇತಿಹಾಸದಲ್ಲಿಲ್ಲ. ಈ ಶಕ್ತಿಯಿರುವುದು ಸಾಹಿತ್ಯಕ್ಕೆ ಮತ್ತು ಕಲೆಗೆ. ಬಾಳಿದ ಮಹಾ ವಿಭೂತಿಗಳ ಕೃತಿಗಳನ್ನು ಇತಿಹಾಸವು ಸೂಚಿಸಬಲ್ಲುದಾದರೆ ಸಾಹಿತ್ಯವು ಅಥವಾ ಕಲೆಯು ಅದನ್ನು ನಮ್ಮ ಮುಂದಿಟ್ಟು ತೋರಿಸಬಲ್ಲುದು; ನಮ್ಮ ಜೀವನವನ್ನು ಅದರ ಬಳಿಯಿಟ್ಟು ನಮ್ಮ ಕೈಯಿಂದಲೇ ಒರೆತಿಕ್ಕಿಸಿ ಯಾವುದು ಹೆಚ್ಚು ಯಾವುದು ಕಡಿಮೆಯೆಂದು ತೋರಿಸಿಕೊಡಬಲ್ಲುದು.

ಇತಿಹಾಸವನ್ನು ಸಾಹಿತ್ಯಕ್ಕೆ ಉಪಯೋಗಿಸಿಕೊಳ್ಳುವಾತನು ತನ್ನ ಕುಶಲತೆಗೆ ಒಗ್ಗಿದಂತೆ ಅಥವಾ ಆಯಾ ಸನ್ನಿವೇಶಕ್ಕೆ ತಾಳು

ವಂತೆ ಕಥೆ, ಕಾದಂಬರಿ, ಪದ್ಯ, ನಾಟಕ ಅಥವಾ ನ್ಯಾಸವನ್ನು ಬರೆಯುತ್ತಾನೆ. ಇವುಗಳಲ್ಲಿ ಯಾವುದೊಂದು ಭಾಗವೂ ನುರಿತ ಲೇಖಕನ ಕೈಯಲ್ಲಿ ಉತ್ತಮ ಫಲವನ್ನೇ ಕೊಡಬಲ್ಲುದು. ಆದರೂ ಇತರೆಯವುಗಳಿಗಿಂತ ನಾಟಕಕ್ಕೆ ಒಂದು ಹೆಚ್ಚು ಅನುಕೂಲವಿದೆ. ಕವಿಯ ಸಾಮರ್ಥ್ಯದಿಂದ ಮತ್ತು ನಮ್ಮ ಕಲ್ಪನಾಶಕ್ತಿಯಿಂದ ಮಾತ್ರವೇ ಕಾಣಬಹುದಾದ ಚಿತ್ರಗಳನ್ನು ಬಿಟ್ಟ ಕಣ್ಣುಗಳಿಂದ ನಾವು ಕಾಣುತ್ತೇವೆ. ಉದ್ದಿಷ್ಟ ವ್ಯಕ್ತಿಗಳ ರೂಪು ನಮ್ಮ ಕಣ್ಣಿಗೆ ಕಟ್ಟು ತ್ತದೆ, ನುಡಿಯು ಕಿವಿಯನ್ನು ಹೊಗುತ್ತದೆ, ಬಾಳು ನಮ್ಮ ಹೃದಯ ದಲ್ಲಿ ನೆಲೆಮಾಡಿಕೊಳ್ಳುತ್ತದೆ. ಒಂದು ದೇಶಕ್ಕೆ ಸಂಬಂಧಪಟ್ಟ ಇತಿಹಾಸದ ಪರಿಚಯವನ್ನು ಜನರಿಗುಂಟುಮಾಡಿಕೊಡಲು ನಾಟ ಕವು ಉತ್ತಮವಾದ ಸಾಧನ.

ಇಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ. ಸಾಮಾನ್ಯವಾಗಿ ನಾಟಕಕಾರನಿಗೆ ಒಂದು ದೌರ್ಬಲ್ಯವಿರುವುದುಂಟು. ಯಾವ ಕಾಲ ದೇಶಗಳಿಗೆ ಸಂಬಂಧಪಟ್ಟ ವಿಚಾರವನ್ನು ಕುರಿತು ಬರೆಯುತ್ತಿದ್ದರೂ ತನ್ನ ಕಾಲದವರ ಭಾವನೆಗಳನ್ನು ಅವರ ಸಮಸ್ಯೆ ಸಮಾಧಾನಗಳನ್ನು ಪ್ರಕೃತ ಸನ್ನಿವೇಶಗಳನ್ನು ಅದರೊಡನೆ ಬೆರೆಸುವುದುಂಟು. ಈ ದೌರ್ಬಲ್ಯವು ಕೆಲವರಲ್ಲಂತೂ ಪರಮಾವಧಿಯನ್ನು ಮುಟ್ಟಿಯೂ ಇರಬಹುದು. ಇತಿಹಾಸದ ಸೋಗೊಂದನ್ನು ಕಟ್ಟಿ ಪ್ರಕೃತ ಸಮಾ ಜವನ್ನು, ಈಗಿನ ಜೀವನದ ಹಾರಾಟವನ್ನು ಅಥವಾ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳನ್ನು ಚಿತ್ರಿಸಲು ಯತ್ನಿಸಿರುವ ನಾಟಕ ಗಳು ಕೆಲವಿವೆ. ಹೀಗೆ ಬರೆದುವು ಎಷ್ಟೇ ಉತ್ತಮವಾಗಿರಬಹು ದಾದರೂ ಜನಾಂಗವನ್ನು ಅಡ್ಡದಾರಿಗೆಳೆಯುತ್ತವೆ. ಇತಿಹಾಸ

ವನ್ನು ಹೀಗೆ ತಪ್ಪಾಗಿ ಉಪಯೋಗಿಸಿಕೊಳ್ಳುವುದು ನಾಟಕಕಾರನ ಆತ್ಮಕ್ಕೆ ಮತ್ತು ತಾನು ಸೇರಿದ ಜನಾಂಗಕ್ಕೆ ಒಂದು ದ್ರೋಹ ಮಾಡಿದಂತೆ.

ಹೀಗೆಂದ ಮಾತ್ರಕ್ಕೆ ನಾಟಕಕಾರನು ಇತಿಹಾಸವನ್ನು ಚಾಚೂ ಮೀರಬಾರದೆಂದು ನನ್ನ ಅಭಿಪ್ರಾಯವಲ್ಲ. ಈ ಕಟ್ಟನ್ನು ವಿಧಿಸುವ ಪಕ್ಷದಲ್ಲಿ ನಾಟಕದ ಅಥವಾ ಬೇರೊಂದು ಲೇಖನದ ಅವಶ್ಯಕತೆಯೇ ಇರುವುದಿಲ್ಲ. ಇತಿಹಾಸವು ಕಣ್ಣು ಕೈಕಾಲು ಗಳನ್ನಿನ್ನೂ ಬಿಡಿಸದ ಒಂದು ವಿಗ್ರಹದ ಹಾಗೆ. ಅದರ ಎಳೆಯೆಳೆ ಯನ್ನೂ ಬಿಡಿಸಿ ತೋರಿಸಿ ನೋಡುವುದಕ್ಕೆ ಸುಂದರವಾಗಿ ಮಾಡಿ ಅವಶ್ಯಕವಿದ್ದರೆ ಒಂದು ಪೀಠವನ್ನೂ ಒಂದು ಪ್ರಭಾವಳಿಯನ್ನೂ ನಿರ್ಮಿಸಿ ಜನರ ಮುಂದಿಡುವುದು ಉತ್ತಮ ಕಲಾವಿದನ ಕೆಲಸ. ಮೊರಟಾಗಿದ್ದ ವಿಗ್ರಹವು ಮನೋಹರವಾಗುವಂತೆ ಮಾಡಿದುದ ಕ್ಕಾಗಿ ಅವನನ್ನು ದೂಷಿಸಬೇಕಾದುದಿಲ್ಲ. ಅದಕ್ಕೆ ಸಲ್ಲದ ಭೇದ ಗಳನ್ನು ಮಾಡಿಲ್ಲದಿದ್ದರೆ ಸಾಕು.

ಕರ್ಣಾಟಕ ಇತಿಹಾಸದ ಆಧಾರದ ಮೇಲೆ ಬರೆದಿರುವ ನಾಟಕಗಳು ಬಹಳ ಸ್ವಲ್ಪ. ನಮ್ಮ ಇತಿಹಾಸವಾದರೂ ಖಂಡಖಂಡ ವಾಗಿದೆ. ಕನ್ನಡನಾಡಿನ ಹಿರಿಮೆಯ ಹೆಗ್ಗುರುತುಗಳು ಎಲ್ಲೆಲ್ಲಿಯೂ ಕಾಣುತ್ತಿವೆ; ಸಿರಿ, ಸಾಹಿತ್ಯ, ಕಲಾ, ಸಂಸ್ಕೃತಿ, ಪರಾಕ್ರಮ, ರಾಜ್ಯ ಸಂಪತ್ತಿ ಎಲ್ಲದರಲ್ಲಿಯೂ ಮೆರೆದ ದೇಶವಿದು ಎಂದು ಎಲ್ಲೆಲ್ಲಿ ಯೂ ಎದ್ದು ಕಾಣುತ್ತಿದೆ. ಆದರೆ ನಮ್ಮ ದುರ್ದೈವದಿಂದ ಆ ಹಿರಿಮೆಯು ಇಂದು ಕನಸಿನ ಗಂಟಾಗಿದೆ. ಸಾವಿರಾರು ಮೈಲಿಗಳ ದೂರದಲ್ಲಿರುವ ಇಂಗ್ಲೆಂಡ್, ಇಟಲಿ ಮುಂತಾದ ದೇಶಗಳ ಚರಿತ್ರೆಯು

ತಿಳಿದಿರುವಂತೆ ಜನ್ಮಭೂಮಿಯ ಚರಿತ್ರೆಯು ತಿಳಿದಿಲ್ಲ; ಅಲೆಕ್ಸಾಂಡರ್, ಜೂಲಿಯಸ್ ಸೀಸರ್ ಇವರ ವಿಚಾರವು ತಿಳಿದಂತೆ ಕೃಷ್ಣದೇವರಾಯ ಚಿಕ್ಕದೇವರಾಜ ಒಡೆಯರುಗಳ ವಿಚಾರವು ತಿಳಿದಿಲ್ಲ. ಹೊರಗಿನವರ ಅಗ್ಗಳಿಕೆಯನ್ನು ತಿಳಿಸುವುದರಲ್ಲಿ ಆಸಕ್ತರಾದವರು ಚಿಕ್ಕಂದಿನಿಂದಲೂ ಅದನ್ನು ನಮ್ಮ ತಲೆಯಲ್ಲಿ ತುಂಬುತ್ತಾರೆ; ನಾವು ಒಗೆದು ಸ್ಥಳಮಾಡಿ ಕೊಟ್ಟು ತುಂಬಿಸಿಕೊಳ್ಳುತ್ತಿದೇವೆ. ಈ ಪರಿಸ್ಥಿತಿಯು ಮಾರ್ಪಟ್ಟು ಕನ್ನಡಿಗರಿಗೆ ಕನ್ನಡ ನಾಡಿನ ಇತಿಹಾಸದ ಪರಿಚಯವು ಎಲ್ಲಕ್ಕಿಂತಲೂ ಮೊದಲುಂಟಾಗುವಂತೆ ಮಾಡುವ ಕೆಲಸವು ಒಬ್ಬಿಬ್ಬರಿಂದ ಆಗತಕ್ಕುದಲ್ಲ. ಸಮಸ್ತ ಜನರೂ ಇದರಲ್ಲಿ ತಮ್ಮ ತಮ್ಮ ಭಾಗವನ್ನು ವಹಿಸಬೇಕು. ನನ್ನ ಪಾಲಿಗೆ ವಹಿಸಿಕೊಂಡಿರುವ ಸೇವೆಯ ಫಲಭಾಗ ಈ ನಾಟಕ.

ಐತಿಹಾಸಿಕ ನಾಟಕಕ್ಕೆ ಅಥವಾ ಯಾವುದೊಂದು ಬಗೆಯ ಐತಿಹಾಸಿಕ ಲೇಖನಕ್ಕೆ ವಸ್ತುವನ್ನು ಸಂಪಾದಿಸುವುದರಲ್ಲಿ ಬರೆಹಗಾರನಿಗೆ ಕೆಲವು ತೊಂದರೆಗಳಿವೆ. ಅವುಗಳಲ್ಲಿ ಮೊದಲನೆಯದು ಸರಿಯಾದ ಇತಿಹಾಸದ ಅಭಾವ. ಇದಕ್ಕೆ, ಕನ್ನಡನಾಡು ಈಗ ಛಿದ್ರಿತವಾಗಿರುವುದೂ ಒಂದು ಮುಖ್ಯ ಕಾರಣವಾಗಿದೆ. ಸಂಯುಕ್ತ ಕರ್ಣಾಟಕದ ಇತಿಹಾಸವು ನಮಗಿಂದು ದೊರೆಯುವಂತಿಲ್ಲ. ಆಯಾ ಪ್ರಾಂತಗಳಲ್ಲಾದರೂ ಅದರದರ ಇತಿಹಾಸವು ಸಮರ್ಪಕವಾಗಿ ತಿಳಿದೀತೋ ಎಂದರೆ ಅದನ್ನೂ ಹೇಳಲಾಗುವುದಿಲ್ಲ. ಅನೇಕ ಕಡೆಗಳಲ್ಲಿ ಅನೇಕ ವಿಚಾರಗಳು ಸಂಶಯದಲ್ಲಿಯೇ ಕೊನೆಗಾಣುತ್ತಿವೆ. ಅವುಗಳನ್ನೆಲ್ಲಾ ವಿಶದವಾಗಿ ಬರೆಯತೊಡಗದೆ ಈ ಲೇಖನದಲ್ಲಿ ಮೈಸೂರು ಇತಿಹಾಸದ ಸಂಬಂಧವಾಗಿ ಮಾತ್ರ ಕೆಲವು ವಿಷಯ

ಗಳನ್ನು ಬರೆಯಬೇಕೆಂದು ಒಂದು ಎಲ್ಲೆಯನ್ನು ಕಲ್ಪಿಸಿಕೊಂಡಿರುತ್ತೇನೆ.

ಮೈಸೂರು ಇತಿಹಾಸವನ್ನು ಮೊದಲು ಒಂದು ರೂಪಕ್ಕೆ ತಂದು ಬರೆದಿಟ್ಟವರು ಈ ಸಂಸ್ಥಾನದಲ್ಲಿ ರೆಸಿಡೆಂಟರಾಗಿದ್ದ (1803-8) ಕರ್ನಲ್‌ಮಾರ್ಕ್ ವಿಲ್ಕ್ಸ್‌ರವರು. ಆಗ್ಯೆ ತಮಗೆ ದೊರೆತ ಆಧಾರಗಳೆಲ್ಲವನ್ನೂ ಶೇಖರಿಸಿ ಅವರು ಮೈಸೂರು ಇತಿಹಾಸದ ಮೇಲೆ ವಿಸ್ತಾರವಾಗಿ ಎರಡು ಸಂಪುಟಗಳನ್ನು ಬರೆದಿದಾರೆ. ಈ ಇತಿಹಾಸದಲ್ಲಿ ಸಹ ಅಲ್ಲಲ್ಲಿ ಸಂಶಯಗಳಿಗೆ ಆಸ್ಪದವಿದೆಯಾದರೂ ಅನೇಕ ವಿಷಯಗಳಲ್ಲಿ ಇದಕ್ಕಿಂತಲೂ ಉತ್ತಮವಾದ ಆಧಾರ ಗ್ರಂಥವು ಇದುವರೆಗೆ ಬಂದಿಲ್ಲ. ಇವರು ಮಾಡಿರುವ ಉಪಕಾರಕ್ಕಾಗಿ ಕನ್ನಡಿಗರು ಇವರಿಗೆ ಚಿರಕಾಲ ಕೃತಜ್ಞರಾಗಿರಬೇಕಾಗಿದೆ. ಮೈಸೂರು ದೇಶಕ್ಕೆ ಇಂಗ್ಲಿಷರು ಪ್ರವೇಶಮಾಡಿದ ಮೇಲೆ ಇಲ್ಲಿ ಕಂಡು ಕೇಳಿದ ಸಂಗತಿಗಳನ್ನು ಮೇಜರ್ ಡೈರೋಮ್, ಲೂಯಿ ಬೌರಿಂಗ್, ಆರ್. ಮೆಕೆಂಜಿ, ಆರ್ಥರ್ ವೆಲ್ಲೆಸ್ಲಿ, ಮೀರ್ ಹುಸೇನ್ ಆಲಿಖಾನ್ ಕೀರ್ಮಾಣಿ ಮುಂತಾದ ಕೆಲವರು ಬರೆದಿಟ್ಟಿದಾರೆ. ಇವುಗಳಲ್ಲಿ ಎಲ್ಲವೂ ನಿಷ್ಪಕ್ಷಪಾತವಾದುವೆಂದು ಹೇಳಲಾಗುವುದಿಲ್ಲ. ಆದರೂ ಇತಿಹಾಸವನ್ನು ತಿಳಿಯಲು ಬಯಸುವವರು ಇವುಗಳನ್ನೂ ಓದುವುದು ಅವಶ್ಯಕ. ಹದಿನೆಂಟನೆಯ ಶತಮಾನದ ಮಧ್ಯಭಾಗಕ್ಕೆ ಹಿಂದಿನ ಇತಿಹಾಸವನ್ನಂತೂ ಕರ್ನಲ್ ವಿಲ್ಕ್ಸ್‌ರವರ ಪುಸ್ತಕದಿಂದಲೇ ಹೆಚ್ಚಾಗಿ ತಿಳಿಯಬೇಕಾಗಿದೆ. ಅವರಿಂದೀಚೆಗೆ ಲೂಯಿರೈಸ್‌ರವರು ವಿಶೇಷ ಶ್ರಮವಹಿಸಿ ಈ ಸೀಮೆಯಲ್ಲಿನ ಶಾಸನಗಳನ್ನು ಪರಿಶೋಧಿಸಿ ಅಚ್ಚು ಹಾಕಿಸಿದಾರೆ; ಮತ್ತು ಮೈಸೂರು ಸಂಸ್ಥಾನದ ಗೆಜೆಟಿಯರ್ ಎಂಬ ವೃತ್ತಾ

ಸಂಗ್ರಹವನ್ನು ಬರೆದು ಪ್ರಕಟಿಸಿದಾರೆ. ಇದೇ ಮಾದರಿಯ ಮೇಲೆ ಇನ್ನೂ ಹೆಚ್ಚು ವಿಷಯಗಳನ್ನೊಳಗೊಂಡಂತೆ ರಾಜಚರಿತಾ ವಿಶಾರದ ರಾವ್‌ಬಹದ್ದೂರ್ ಸಿ. ಹಯವದನರಾಯರು ಒಂದು ಗೆಜೆಟಿಯರನ್ನು ಬರೆದು ಪ್ರಕಟಿಸಿದಾರೆ. ಇವೆರಡು ಗೆಜೆಟಿಯರುಗಳಿಂದಲೂ ಮೇಲೆ ಹೇಳಿದ ಕಾಲದ ಇತಿಹಾಸವು ವಿಲ್ಕ್ಸ್‌ರವರು ಬರೆದಿರುವುದಕ್ಕಿಂತ ಹೆಚ್ಚು ವಿಶದವಾಗಿ ತಿಳಿಯಬರುವುದಿಲ್ಲ. ರೈಸ್‌ರವರು ಪ್ರಕಟಿಸಿರುವ ಶಾಸನಗಳಿಂದಲೂ ಆಗಿನ ಕಾಲಕ್ಕೆ ಸಂಬಂಧಪಟ್ಟ ಲಾವಣಿಗಳು ಮತ್ತು ಇತರ ಸಾಹಿತ್ಯದಿಂದಲೂ ಹಿಂದಿನ ಇತಿಹಾಸವನ್ನು ತಿಳಿಯಲು ಸ್ವಲ್ಪಮಟ್ಟಿಗೆ ಅನುಕೂಲವಾಗುತ್ತದೆ. ಇನ್ನು, ನನಗೆ ತಿಳಿದಂತೆ, ಮೈಸೂರು ಇತಿಹಾಸವನ್ನು ಇದುವರೆಗೆ ಕನ್ನಡದಲ್ಲಿ ಬರೆದಿರುವವರು ರಾಜಕಾರ್ಯ ಪ್ರಸಕ್ತ ರಾವ್‌ಬಹದ್ದೂರ್ ಎಂ. ಶ್ಯಾಮರಾಯರೊಬ್ಬರೇ; ಅವರು ಬರೆದಿರುವ ಪುಸ್ತಕವು ಸಹ ಶಾಲಾ ಬಾಲಕರಿಗೆ ಮಾತ್ರವೇ ಉಪಯೋಗವಾಗುವಂತಹುದು. ಇವಿಷ್ಟೇ ಅಲ್ಲದೆ ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಚಿಕ್ಕದೇವರಾಜ ಮುಂತಾದ ಕವಿಗಳು ಬರೆದಿರುವ ಗ್ರಂಥಗಳಿಂದಲೂ ಸಹ ಇತಿಹಾಸಕ್ಕೆ ಸಹಾಯಕವಾಗಬಹುದಾದ ಅಂಶಗಳು ಸಿಗುತ್ತವೆ. ಇಂಥ ಗ್ರಂಥಗಳಲ್ಲಿ ಬಹು ಭಾಗವು ಇತಿಹಾಸದಿಂದ ಬಹುದೂರವಾಗಿರುವುದು ಸಹಜವಾದರೂ ಅವುಗಳಲ್ಲಿ ಇತಿಹಾಸದ ಸೋಂಕು ಇರದೆ ಹೋಗುವುದಿಲ್ಲ. ಅವನ್ನೂ ಶೋಧಿಸುವುದು ಉತ್ತಮ. ಈ ತೆರದಲ್ಲಿ ಮೈಸೂರು ಇತಿಹಾಸವನ್ನು ತಿಳಿಯಲು ಸಹಾಯಮಾಡುವ ಗ್ರಂಥಗಳಲ್ಲಿ ಕೆಲವನ್ನು ಶ್ರೀಮಾನ್ ಹಯವದನರಾಯರು ತಮ್ಮ ಗೆಜೆಟಿಯರಿನ II (iv) ಭಾಗದ ಕೊನೆಯಲ್ಲಿ ಕೊಟ್ಟಿದಾರೆ. ಈ

ನಾಟಕಕ್ಕಾಗಿ ನಾನು ಉಪಯೋಗಿಸಿಕೊಂಡಿರುವ ಗ್ರಂಥಗಳನ್ನು ಅನುಬಂಧದಲ್ಲಿ ಕೊಟ್ಟಿದೇನೆ; ಮತ್ತು ಆಯಾ ಗ್ರಂಥಕರ್ತರುಗಳಿಗೆ ಈ ಮೂಲಕ ನನ್ನ ಕೃತಜ್ಞತೆಯನ್ನು ಸೂಚಿಸುತ್ತೇನೆ.

ಇನ್ನು ಈ ನಾಟಕದ ವಿಚಾರವಾಗಿ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಮೇಲೆಯೇ ಸೂಚಿಸಿರುವಂತೆ ಈ ನಾಟಕದ ವಸ್ತುವಿನ ಬಹುಭಾಗವನ್ನು ವಿಲ್ಕ್ಸ್‌ರವರ ಚರಿತ್ರೆಯಿಂದ ತೆಗೆದುಕೊಂಡಿದೆ. ರಾಜಒಡೆಯರ ಆಳ್ವಿಕೆಯ ಸಂಬಂಧವಾಗಿ ಅವರು ಬರೆದಿರುವುದರ ಸಾರಾಂಶವಿದು :—

"ಬೆಟ್ಟದ ಚಾಮರಾಜ ಒಡೆಯರು ಶೂರರಾದರೂ ರಾಜಕಾರ್ಯದಲ್ಲಿ ದಕ್ಷರಾದುದರಿಂದ ಅರಮನೆಯ ಹಿರಿಯರು ರಾಜಒಡೆಯರನ್ನು ಪಟ್ಟಕ್ಕೆ ತಂದರು. ಇದರಿಂದ ಮೊದಮೊದಲು ಬೆಟ್ಟದ ಚಾಮರಾಜ ಒಡೆಯರು ಅಸಮಾಧಾನಗೊಂಡಿದ್ದರೂ ಕಾರುಗಹಳ್ಳಿ ವೀರರಾಜಯ್ಯನ ಮುತ್ತಿಗೆಯಿಂದ ಮೈಸೂರನ್ನು ಉಳಿಸುವ ಪ್ರಸಂಗವೊಂದು ಬಂದನಂತರ ತಮ್ಮನಿಗೆ ಬೆಂಬಲವಾಗಿ ನಿಂತು ಪರರಾಜ್ಯಗಳನ್ನು ಗೆದ್ದು ಮೈಸೂರಿಗೆ ಸೇರಿಸುತ್ತ ಬಂದರು ಮತ್ತು ಅಂದಿನಿಂದ ಅಣ್ಣತಮ್ಮಂದಿರು ಬಹಳ ಅನ್ಯೋನ್ಯವಾಗಿದ್ದರು. ಅತ್ತ ವಿಜಯನಗರವು ಹಾಳಾದಬಳಿಕ ಶ್ರೀರಂಗಪಟ್ಟಣದಲ್ಲಿ ವಿಜಯನಗರದ ಪ್ರತಿನಿಧಿಯಾಗಿದ್ದ ಶ್ರೀರಂಗರಾಯರ (ತಿರುಮಲರಾಯ) ಬಲವು ಕುಗ್ಗುತ್ತ ಬಂದು ಪಾಳೆಯಗಾರರ ಪ್ರಾಬಲ್ಯವು ಹೆಚ್ಚಾಗುತ್ತಿದ್ದಿತು; ಮತ್ತು ಆ ಪ್ರತಿನಿಧಿಯ ಅಸಮರ್ಥತೆಯಿಂದ ರಾಜ್ಯವು ದಿನೇದಿನೇ ಕೃಶವಾಗುತ್ತಿದ್ದಿತು. ಒಂದು ಸಲ ರಾಜಒಡೆಯರು ಎಂದಿನಂತೆ ತಾಳಮೇಳಗಳನ್ನು ಮಾಡಿಸಿಕೊಂಡು ಶ್ರೀರಂಗಪಟ್ಟಣಕ್ಕೆ ಹೋಗುತ್ತಿದ್ದಾಗ ಕೆಂಬಾಳದ ಪಾಳೆಯಗಾರನೂ ಸಹ ತಾಳಮೇಳಗಳಿಂದ ಹೋಗುತ್ತಿದ್ದುದನ್ನು ಕಂಡು ತಮ್ಮ ವಾದ್ಯಗಳನ್ನು ನಿಲ್ಲಿಸಿ ಹಾಗೆಯೇ ಶ್ರೀರಂಗರಾಯರ ಆಸ್ಥಾನಕ್ಕೆ ಹೋದರು. ಅಲ್ಲಿ ಈ ವಿಚಾರವು ಬಂದು ರಾಜಒಡೆಯರಿಗೂ ಕೆಂಬಾಳದವರಿಗೂ ವಾದವಾದುದರಿಂದ ರಾಜಒಡೆಯರು

ಮರುದಿನ ಕೆಂಬಾಳವನ್ನು ಮುತ್ತಿ ಅದನ್ನು ಸ್ವವಶ ಮಾಡಿಕೊಂಡರು. ಅನಂತರ ಆಗಾಗ್ಯೆ ಮೈಸೂರಿಗೂ ಶ್ರೀರಂಗಪಟ್ಟಣಕ್ಕೂ ಯುದ್ಧಗಳಾಗುತ್ತಿದ್ದುವು. ಆದರೂ ರಾಜಒಡೆಯರು ತಮ್ಮ ಬಲವನ್ನು ಹೆಚ್ಚಿಸಿಕೊಳ್ಳುತ್ತಿದ್ದರೇ ಹೊರತು ಶ್ರೀರಂಗರಾಯರ ಮೇಲೆ ಬದ್ಧದ್ವೇಷವನ್ನು ಸಾಧಿಸಿರಲಿಲ್ಲ. ಶ್ರೀರಂಗರಾಯರು ಮಾತ್ರ ಹೇಗಾದರೂ ರಾಜಒಡೆಯರನ್ನು ತೀರಿಸಿಕೊಳ್ಳಬೇಕೆಂದು ಯೋಚಿಸಿ ಗೋಪ್ಯವಾಗಿ ಅವರನ್ನು ಕೊಲ್ಲಲು ಒಬ್ಬ ಅಧಿಕಾರಿಯನ್ನು ನೇಮಿಸಿ ಕಳುಹಿಸಿದರು. ರಾಜಒಡೆಯರ ಆಪ್ತ ಭೃತ್ಯನೊಬ್ಬನ ಎಚ್ಚರಿಕೆಯಿಂದ ಈ ಸಂಚು ನೆರವೇರಲಿಲ್ಲ. ಅಲ್ಲಿಗೂ ಶ್ರೀರಂಗರಾಯರು ಸುಮ್ಮನಿರದೆ ಬೆಟ್ಟದ ಚಾಮರಾಜ ಒಡೆಯರನ್ನು ತಮ್ಮ ಕಡೆ ಸೇರಿಸಿಕೊಂಡು ತಮ್ಮ ಪಕ್ಷವನ್ನು ಬಲಪಡಿಸಿಕೊಂಡರು. ಇದು ಕಂಡು ರಾಜಒಡೆಯರು ಉಪಾಯಾಂತರದಿಂದ ತಮ್ಮ ಅಣ್ಣನವರನ್ನು ಹಿಡಿತರಿಸಿ ಅವರು ತಮ್ಮ ಮನೆಯನ್ನು ಬಿಡದಂತೆ ನಿಯಮಿಸಿದರು. ಕುಮಾರ ನರಸರಾಜನೆಂಬಾತನು ರಾಜಒಡೆಯರ ಕಟಾಕ್ಷಕ್ಕೆ ಪಾತ್ರನಾಗುವನೆಂಬ ದುಷ್ಟಭಾವನೆಯಿಂದ ಬೆಟ್ಟದ ಚಾಮರಾಜ ಒಡೆಯರ ಕಣ್ಣುಗಳನ್ನು ಕೀಳುವನು. ಇದು ಕೇಳಿ ರಾಜಒಡೆಯರು ಬಹಳ ಮರುಗುವರು. ಇಷ್ಟರಲ್ಲಿ ಶ್ರೀರಂಗರಾಯರಿಗೆ ರಾಜಕುರುವಿನ ಬಾಧೆಯು ಹೆಚ್ಚಾಗಲು ಶ್ರೀರಂಗಪಟ್ಟಣವನ್ನು ರಾಜಒಡೆಯರಿಗೆ ಬಿಟ್ಟುಕೊಟ್ಟು ತಮ್ಮ ಕಡೆಯ ದಿನಗಳನ್ನು ತಳಕಾಡಿನಲ್ಲಿ ಕಳೆಯಲು ಹೊರಟುಹೋದರು.''

ಈ ವಸ್ತುವನ್ನು ತೆಗೆದುಕೊಂಡು ಅಲ್ಲಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡಿ ಮುಖ್ಯ ವಿಷಯಗಳಿಗೆ ಭಂಗವುಂಟಾಗದಂತೆ ಮತ್ತು ವೃಥಾ ಕಥೆಯು ಬೆಳೆಯದಂತೆ ಇದನ್ನು ಚಿತ್ರಿಸಲು ಯತ್ನಿಸಿದೇನೆ. ಕೆಲವು ಚಿಕ್ಕ ವಿಚಾರಗಳನ್ನು ಅಲ್ಲಲ್ಲಿ ಬಿಟ್ಟಿರುವುದೂ ಉಂಟು; ಏಕೆಂದರೆ ನಾನಿಲ್ಲಿ ಚರಿತ್ರೆಯನ್ನು ಬರೆಯ ಹೊರಟಿಲ್ಲ. ಈ ನಾಟಕದಲ್ಲಿ ಬರುವ ಜ್ಯೋತಿಲ, ನಂಜಮ್ಮ ಮತ್ತು ಚಂದ್ರವದನೆ ಈ ಮೂವರೂ ನನ್ನ ಊಹೆಗೆ ಸೇರಿದವರು. ಆದರೂ ಇವರು ಒಂದಲ್ಲ ಒಂದು ರೂಪದಲ್ಲಿ ಇತಿಹಾಸದಲ್ಲಿರುವವರೇ. ನಾನು ವಹಿಸಿರುವ

ಸ್ವಾತಂತ್ರ್ಯವೆಂದರೆ ಅವರಿಗೆ ಸ್ವಲ್ಪ ಹೆಚ್ಚು ಪ್ರಾಶಸ್ತ್ಯ ಕೊಟ್ಟಿರಬಹುದು ಅಥವಾ ಅವರ ಗುಣಗಳಿಗೆ ಸ್ವಲ್ಪ ಬಣ್ಣ ಕಟ್ಟಿರಬಹುದು. ಇದರಿಂದ ಇತಿಹಾಸದ ಮುಖ್ಯಾಂಶಗಳಿಗೆ ಯಾವ ಕುಂದೂ ಉಂಟಾಗಿಲ್ಲವೆಂದು ನಾನು ಭಾವಿಸಿದೇನೆ. ಇಷ್ಟು ಹೊರತು ಈ ನಾಟಕದ ವಿಷಯವಾಗಿ ಹೆಚ್ಚು ಹೇಳುವುದು ಅಪ್ರಕೃತವೆಂದು ನನಗೆ ತೋರುತ್ತಿದೆ.

ಹಿಂದೆಯೇ ನಾನು ಬಿನ್ನವಿಸಿರುವ ಹಾಗೆ ಇತಿಹಾಸವನ್ನು ಸಾಹಿತ್ಯ ರೂಪದಲ್ಲಿ ನಮ್ಮ ಜನರ ಮುಂದಿಡಲು ನಾನು ಮಾಡುತ್ತಿರುವ ಪ್ರಯತ್ನದ ಫಲವಿದು. ಉಚಿತವೆಂದು ತೋರಿದ ಕೆಲಸವನ್ನು ನನಗೆ ತೋರಿದ ದಾರಿಯಲ್ಲಿ ಮಾಡಿದೇನೆ. ಈ ನಾಟಕವನ್ನೋದುವುದರಿಂದ ಅಥವಾ ನೋಡುವುದರಿಂದ ಮೈಸೂರ ಇತಿಹಾಸವು ಕಿಂಚಿತ್ತಾದರೂ ನಮ್ಮ ಜನರಿಗೆ ತಿಳಿಯಬಹುದಾದರೆ ಮತ್ತು ಮೈಸೂರು ಮೇಲಿನ ಅಭಿಮಾನವು ಸ್ವಲ್ಪವಾದರೂ ಹೆಚ್ಚಬಹುದಾದರೆ ನನ್ನ ಸೇವೆಯು ಸಾರ್ಥಕವಾಯಿತೆಂದೆಣಿಸುವೆನು.

ಈ ನಾಟಕವನ್ನು ಅಚ್ಚುಹಾಕಿಸುವುದರಲ್ಲಿ ಕೆಲವು ಮಂದಿ ಹಿರಿಯರು ಮತ್ತು ನನ್ನ ಕೆಲವು ಮಿತ್ರರು ಬಹಳ ಪ್ರೋತ್ಸಾಹಿಸಿದ್ದಾರೆ. ಅದಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದೇನೆ. ಈ ಪುಸ್ತಕದ ಪ್ರಕಟಣೆಯನ್ನು ಕೈಗೊಂಡ ವಿ. ಜಿ. ಟಿ. ಜನರಲ್ ಏಜನ್ಸಿಯವರನ್ನೂ ಮತ್ತು ಇದನ್ನು ಮುದ್ರಿಸಿಕೊಟ್ಟ ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್ ಮಾಲೀಕರನ್ನೂ ಈ ಮೂಲಕ ವಂದಿಸುತ್ತೇನೆ.

ಬೆಂಗಳೂರು ನಗರ
೨೨—೧೨—೧೯೪೩. } **ಮ. ನರಸಿಂಹಮೂರ್ತಿ.**

# ವಿಷಯ ಸೂಚಿಕೆ

# ಪಾತ್ರಗಳು

| | |
|---|---|
| ರಾಜಒಡೆಯರು | ಮೈಸೂರಿನ ದೊರೆ |
| ಬೆಟ್ಟದ ಚಾಮರಾಜಒಡೆಯರು | ರಾಜ ಒಡೆಯರ ಅಣ್ಣ |
| ಮೈಸೂರಿನ ಮಂತ್ರಿ | |
| ಮೈಸೂರಿನ ದಳವಾಯಿ | |
| ಜ್ಯೋತಿಲನಾಯಕ | ರಾಜಒಡೆಯರ ಆಪ್ತ ಸರದಾರ |
| ಶ್ರೀರಂಗರಾಯ | ಶ್ರೀರಂಗಪಟ್ಟಣವನ್ನಾಳುತ್ತಿರುವ ವಿಜಯನಗರದ ಪ್ರತಿನಿಧಿ |
| ರಾಮಾನುಜಯ್ಯಂಗಾರ್ಯ | ಶ್ರೀರಂಗರಾಯರ ಮಂತ್ರಿ |
| ಚೆನ್ನಮನಾಯಕ | ಶ್ರೀರಂಗರಾಯರ ಸೇನಾಪತಿ |
| ನಂಜಯ್ಯ | ಕೆಂಬಾಳದ ಪಾಳೆಯಗಾರ |
| ವೀರರಾಜಯ್ಯ | ಕಾರುಗಹಳ್ಳಿಯ ಪಾಳೆಯಗಾರ |
| ನರಸಿಂಗನಾಯಕ | ಅಕ್ಕಿಹೆಬ್ಬಾಳದ ಪಾಳೆಯಗಾರ |
| ಚಂದ್ರವದನೆ | ಮೈಸೂರಿನ ನರ್ತಕಿ |

ಇತರ ಪಾಳೆಯಗಾರರು, ಸೈನಿಕರು, ಹೊಗಳಭಟರು, ಸೇವಕರು ಮುಂತಾದವರು.

# ರತ್ನಸಿಂಹಾಸನ



## ಸ್ಥಾನ ೧

(ಶ್ರೀರಂಗಪಟ್ಟಣದಲ್ಲಿ ಶ್ರೀರಂಗರಾಯರ ಒಡ್ಡೋಲಗಕ್ಕೆ ಹೋಗುವ ದಾರಿ. ವೀರರಾಜಯ್ಯ, ನರಸಿಂಗನಾಯಕ ಮುಂತಾದ ೪-೬ ಜನ ಪಾಳೆಯಗಾರರು ಮಾತನಾಡುತ್ತ ಹೋಗುತ್ತಿರುವರು.)

ವೀರರಾಜಯ್ಯ—ನರಸಿಂಗನಾಯಕರೆ! ನಿಮ್ಮ ರಾಜ್ಯದ ವಿಚಾರವು ಈ ದಿನವೇ ನಿರ್ಧಾರವಾಗಬೇಕೆಂದು ನೀವು ಒತ್ತಾಯಮಾಡಬೇಕು.

ನರಸಿಂಗನಾಯಕ—ಶ್ರೀರಂಗರಾಯರು ಒಪ್ಪುತಾರೋ ಇಲ್ಲವೊ.

ವೀರ—ಒಪ್ಪದೆ ಏನು ಮಾಡುತಾರೆ. ನಾವೆಲ್ಲಾ ನಿಮಗೆ ಬೆಂಬಲವಾಗಿದೇವೆ. ಅಲ್ಲವೆ ದೊರೆಗಳೆ?

ಎಲ್ಲರೂ—ಹೌದು, ಹೌದು. ನಾವು ಸಹಾಯಮಾಡುತ್ತೇವೆ.

ವೀರ—ಸ್ವತಂತ್ರರಾಷ್ಟ್ರಾಧಿಪರಾದ ನಿಮ್ಮ ರಾಜ್ಯವನ್ನು ಕಿತ್ತುಕೊಳ್ಳುವುದಕ್ಕೆ ಆ ಮಹಿಸೂರಿನವನಿಗೆ ಯಾವ ಹಕ್ಕು ಬಂತೋ ತುಂಬಿದ ಸಭೆಯಲ್ಲಿ ಹೇಳಲಿ.

ತಲಕಾಡು—ಹೌದು. ಕೇಳಬೇಕಾದ್ದೇ ನಿಜ. ನಾವೆಲ್ಲಾ ಸುಮ್ಮನಿದ್ದುದಕ್ಕೇ ಅವನಷ್ಟು ಪ್ರಬಲಿಸಿರುವುದು.

ಉಮ್ಮಚವಾಡಿ—ನಮ್ಮ ರಾಜ್ಯಗಳ ಮೇಲೆ ತಾನು ಅಧಿಕಾರ ಮಾಡುವುದಕ್ಕೆ ಬರುತಾನೆ. ಕಪ್ಪಕಾಣಿಕೆಗಳನ್ನು ಕೊಡಬೇಕಂತೆ ಈ ಚಕ್ರಾಧಿಪತಿಗೆ.

ವೀರ—ಚಕ್ರಾಧಿಪತಿ. ನಿಮ್ಮ ಚಕ್ರೇಶ್ವರನ ಪಾಡು ಈ ದಿನ ಏನಾಗುವುದೋ ನೋಡಿ.

ತಲಕಾಡು—ಈ ಉತ್ಸವಕ್ಕೆ ಬೆಟ್ಟದ ಚಾಮುರಾಜನೂ ಬಂದಿದಾನೆಯೆ, ವೀರರಾಜಯ್ಯ.

ವೀರ—ಇಲ್ಲ, ಅವನು ಬರಲಿಲ್ಲವಂತೆ, ರಾಜಒಡೆಯನೊಬ್ಬನೇ ಬಂದಿರುವುದು.

ಉಮ್ಮಚವಾಡಿ—ಸದ್ಯಃ ಒಂದು ಪಕ್ಷಕ್ಕೆ ಒಳ್ಳೆಯದೇ ಆಯಿತು.

ನರಸಿಂಗ—ನಾವೆಲ್ಲಾ ಒಟ್ಟುಗೂಡಿರುವುದು ರಾಜಒಡೆಯರಿಗೆ ಇನ್ನೂ ತಿಳಿದ ಹಾಗೆ ಕಾಣೆ.

ವೀರ—ತಿಳಿದರೆ ತಾನೆ ಏನು. ತಲಕಾಡು, ಉಮ್ಮಚವಾಡಿ, ಅರಕೆರೆ, ಕನ್ನಂಬಾಡಿ ಈ ದೇಶಗಳ ದೊರೆಗಳು ನೀವು ನಾನು ಇಷ್ಟು ಜನವೂ ಸೇರಿದೇವೆಂದು ಕೇಳಿದರೆ ಅವನಿಗೆ ಎದೆಯೇ ಒಡೆದು ಹೋಗಬೇಕು. ಸಾಲದುದಕ್ಕೆ ಕೆಂಬಾಳದ ಹುಲಿ ನಂಜಯ್ಯ ಬೇರೆ ನಿಂತಿದಾನೆ.

ಕನ್ನಂಬಾಡಿ—ಈ ದಿನದ ಓಲಗಕ್ಕೆ ನಂಜಯ್ಯ ವಾದ್ಯ ಸಮೇತರಾಗಿ ಬರುತಾರೆಯೆ ?

ವೀರ—ಹೌದು. ಬೇಕಾದ ಹಾಗೆ ತಾಳ, ಮೇಳ, ಕೊಂಬು, ಕಹಳೆ ಎಲ್ಲಾ ಮಾಡಿಸಿಕೊಂಡು ಮಹಿಸೂರಿನವನಿಗೆ ಎರಡರಷ್ಟು ವೈಭವದಿಂದ ಬರುತ್ತಾರೆ.

ತಲಕಾಡು—ನಾವೂ ವಾದ್ಯಗಳನ್ನು ಮಾಡಿಸಿಕೊಂಡು ಹೋಗಬಹುದಾಗಿತ್ತಲ್ಲ. ನಾವೇನು ಅವರಿಗಿಂತ ಕಡಿಮೆ.

ವೀರ—ಈ ಸಲಕ್ಕೆ ಅವರೊಬ್ಬರೇ ಸಾಕು. ಮಹಿಸೂರಿನವನಿಗೆ ಪ್ರತಿಕಕ್ಷಿ ಹೂಡಬೇಕೆಂದು ಈಗ ಎತ್ತಿಕಟ್ಟಿರುವುದು ಅಷ್ಟೇ. ಸಭೆಗೆ

ಬರುವಾಗಲೇ ಹೀಗೆ ಅವಮಾನಪಟ್ಟು ಬರುವುದೊಂದು, ಸಭೆಯಲ್ಲಿ ನರಸಿಂಗನಾಯಕರ ರಾಜ್ಯದ ಪ್ರಶ್ನೆಯು ಬಂದು ನಾವೆಲ್ಲರೂ ಮೂದಲಿಸುತ್ತಾ ನಿಲ್ಲುವುದೊಂದು. (ಮುಂದೆ ತೋರಿಸಿ) ಅಲ್ಲಿ ನೋಡಿ ದೊರೆಗಳೆ, ಸಂಜಯ್ಯ ಆಗಲೇ ವಾದ್ಯಸಮೇತ ಹೋಗುತ್ತಿದಾರೆ.

ಎಲ್ಲರೂ—ಹೌದು, ಹೌದು.

ಉಮ್ಮಚವಾಡಿ—ರಾಜಒಡೆಯರು ಸಭೆಗೆ ಬರದೆ ಹಾಗೆಯೇ ಹಿಂದಕ್ಕೆ ಹೋದರೆ.

ವೀರ—ಮತ್ತೂ ಒಳ್ಳೆಯದೇ ಆಯಿತು. ಶ್ರೀರಂಗರಾಯರಿಗೆ ಇದರಿಂದ ಅಪಮಾನವಾಯಿತೆಂದು ಅವರನ್ನು ಕೆರಳಿಸಿ ಮಹಿಸೂರ ಮೇಲೆ ಯುದ್ಧಕ್ಕೆ ಸುಲಭವಾಗಿ ಹೊರಡಿಸಬಹುದು.

ತಲಕಾಡು—ಸರಿಯಾದ ಮಾತು. ಹೇಗೂ ನೀವು ಹಿಂಜರಿಯಬಾರದು ನರಸಿಂಗನಾಯಕರೆ!

ನರಸಿಂಗ—ಛೆ, ಛೆ, ನನಗೇನು ಭಯ.

(ಹಿಂದೆ ಕಹಳೆಯ ಧ್ವನಿ ಕೇಳಿಸುವುದು)

ವೀರ—ಓಹೋ, ರಾಜಒಡೆಯರು ಇತ್ತಕಡೆಯಿಂದ ಬರುತ್ತಿರುವ ಹಾಗಿದೆ. ಮುಂದೆ ಹೆಜ್ಜೆ ಹಾಕಿ, ಹೊತ್ತಾಗುತ್ತ ಬಂತು.

(ಅವರತ್ತ ಹೋದಮೇಲೆ ಕೊಂಬು ಕಹಳೆ ಮುಂತಾದ ವಾದ್ಯ ಘೋಷದಿಂದ ರಾಜಒಡೆಯರು ಪರಿಜನರೊಡನೆ ಬರುವರು)

ರಾಜಒಡೆಯರು—(ಅರಮನೆಯ ದ್ವಾರದ ಕಡೆ ನೋಡಿ) ಜ್ಯೋತಿಲ! ಅದು ಯಾರು ಈಗ ಒಳಗೆ ಹೋದವರು.

ಜ್ಯೋತಿಲನಾಯಕ—ಅವರು ವೀರರಾಜಯ್ಯ, ನರಸಿಂಗನಾಯಕರು....

ರಾಜ—ಅವರಲ್ಲ. ಅತ್ತ ಕಡೆಯ ಬಾಗಿಲಲ್ಲಿ ವಾದ್ಯಗಳನ್ನು ಮಾಡಿಸಿ ಕೊಂಡು ಹೋಗುತ್ತಿರುವವರು.

ಜ್ಯೋತಿಲ—ಅವರು ಕೆಂಬಾಳದ ಸಂಜಯ್ಯನವರು ಪ್ರಭು.

ರಾಜ—ಕೆಂಬಾಳದವನೆ. ಕೆಂಬಾಳದವನಿಗೆ ಇಷ್ಟು ಅಟ್ಟಹಾಸ, ಇಷ್ಟು ಆಡಂಬರ........ ಜ್ಯೋತಿಲ.

ಜ್ಯೋತಿಲ—ಪ್ರಭು.

ರಾಜ—ನಮ್ಮ ವಾದ್ಯಗಳನ್ನು ನಿಲ್ಲಿಸು, ನಿಶ್ಶಬ್ದವಾಗಿಯೇ ನಾವು ಓಲಗದೊಳಕ್ಕೆ ಹೋಗುತ್ತೇವೆ.

ಜ್ಯೋತಿಲ—ಪ್ರಭೂ. ಹಾಗೆ ಮಾಡುವುದು........

ರಾಜ—ನಮ್ಮಿಷ್ಟ.

ಜ್ಯೋತಿಲ—ಅಪ್ಪಣೆ. (ಜ್ಯೋತಿಲನ ಅಪ್ಪಣೆಯ ಮೇಲೆ ವಾದ್ಯಗಳು ನಿಲ್ಲುವುವು) ಆದರೆ ಒಂದು ಮಾತು ಪ್ರಭೂ. ಈಗೊಂದು ತಿಂಗಳಿಂದಲೂ ಶ್ರೀರಂಗರಾಯರ ಬಳಿ ಗುಪ್ತಾಲೋಚನೆಗಳು ಬಹಳವಾಗಿ ನಡೆಯುತ್ತಿವೆ. ಎಲ್ಲ ಪಾಳೆಯಗಾರರೂ ಕಲೆತಿದ್ದಾರೆ. ಎಂದೂ ಇಲ್ಲದ ಮರ್ಯಾದೆಯನ್ನು ಕೆಂಬಾಳದವನಿಗೆ ಬೇಕಾಗಿ ಕೊಟ್ಟಿರುತ್ತಾರೆ. ಸಭೆಯಲ್ಲಿ ಇನ್ನು ಹೇಗಿರುವುದೋ ಏನೋ ; ಮುಂದೆ ಹೇಳುವ ಶಕ್ತಿ ನನಗಿಲ್ಲ.

ರಾಜ—ಎಲ್ಲ ಪಾಳೆಯಗಾರರೂ ಈಗ ಬಂದಿದಾರೆಯೆ ?

ಜ್ಯೋತಿಲ—ಹೌದು ಪ್ರಭು.

ರಾಜ—ನಾವು ನಾವೇ ಸ್ವತಂತ್ರರೆಂದು ಸ್ವೇಚ್ಛೆಯಾಗಿದ್ದವರು ಈಗ ಇಲ್ಲಿಗೆ ಹೇಗೆ ಬಂದರು. ನಮ್ಮ ಮೇಲೆ ದೂರಿಡುವುದಕ್ಕೇನೋ.

ಜ್ಯೋತಿಲ—ಇರಬಹುದು ಪ್ರಭು.

ರಾಜ—ಚಿಂತೆಯಿಲ್ಲ ಜ್ಯೋತಿಲ. ಇಂದು ಕೂಡಿ ನಾಳೆ ಒಡೆಯುವ ಇವರನ್ನು ನಂಬಿದರೆ ಶ್ರೀರಂಗರಾಯರೇ ಕೆಡುವರು. ಇಪ್ಪಾಗಿ ಇವರೆಲ್ಲರೂ ಸೇರಿ ಏನುಮಾಡುವರೋ ನೋಡೋಣ.

ಜ್ಯೋತಿಲ—ಅಪ್ಪಣೆ.

## ಸ್ಥಾನ ೨—ಶ್ರೀರಂಗಪಟ್ಟಣದ ಓಲಗಶಾಲೆ

(ಶ್ರೀರಂಗರಾಯರು ಉಚ್ಚಾಸನದಲ್ಲಿ ಕುಳಿತಿರುವರು. ಪ್ರಧಾನಿ, ದಳವಾಯಿ ಮುಂತಾದವರೂ ಸಾಮಂತ ಪಾಳೆಯಗಾರರೂ ಇರುವರು. ನರಸಿಂಗ ನಾಯಕರು ಎದ್ದು ದೂರು ಹೇಳುತ್ತಿರುವರು.)

ಶ್ರೀರಂಗರಾಯರು—ನೀವು ಹೇಳುವುದೆಲ್ಲಾ ನಿಜ ನರಸಿಂಗನಾಯಕರೆ. ಆದರೆ ಆ ವಿಚಾರವನ್ನು ಚರ್ಚೆಗಿಟ್ಟುಕೊಳ್ಳಲು ಇದು ಸಮಯವಲ್ಲ.

ನರಸಿಂಗ—ಈಗ ಆರು ವರ್ಷಗಳಿಂದಲೂ ಇದಕ್ಕಾಗಿ ಕಾದಿದ್ದೇನೆ ಪ್ರಭು. ಇಷ್ಟು ಪಾಳೆಯದವರು ಕಲೆತಿರುವಾಗ ಇದು ತೀರ್ಮಾನ ವಾಗದಿದ್ದರೆ ಇನ್ನಾವಾಗಲೂ ಆಗಲಾರದು. ಯಾವುದೋ ಒಂದು ಸಣ್ಣ ಕಾರಣಕ್ಕಾಗಿ ರಾಜಒಡೆಯರು ನನ್ನ ರಾಜ್ಯವನ್ನೇ ಕಿತ್ತುಕೊಂಡಿದಾರೆ. ನಾನು ತಮ್ಮ ಸಂಸ್ಥಾನಕ್ಕೆ ಸೇರಿದವನು. ನನ್ನನ್ನು ರಕ್ಷಿಸುವ ಭಾರ ತಮ್ಮದು.

ಶ್ರೀರಂಗ—ಹೌದು ನರಸಿಂಗನಾಯಕರೆ. ಈ ಸಂಗತಿಯನ್ನು ಮೊದಲೇ ನಮಗೆ ತಿಳಿಸಿದ್ದರೆ ಚೆನ್ನಾಗಿತ್ತು. ಯಾವುದೋ ಕೆಲಸಕ್ಕಾಗಿ ಕರೆಸಿ ಮಧ್ಯೆ ಈ ವಿಚಾರಣೆಯಿಟ್ಟುಕೊಳ್ಳುವುದು ಸರಿಯಲ್ಲ.

ನರಸಿಂಗ—ಹಾಗಾದರೆ ಅವರು ಮಾಡುವ ಅಪಚಾರಕ್ಕೆ ಪ್ರತಿಯೇ ಇಲ್ಲವೆ?

ಶ್ರೀರಂಗ—ರಾಜಒಡೆಯರು ಈಗ ನಮ್ಮ ಅತಿಥಿಗಳಾಗಿದ್ದಾರೆ. ಈ ವಿಚಾರಣೆಗಳನ್ನಿಟ್ಟುಕೊಳ್ಳುವುದು ಸರಿಯಲ್ಲ.

ನರಸಿಂಗ—ಅದಾಗದು ಪ್ರಭೂ. ಈ ದಿನವೇ ನನ್ನ ರಾಜ್ಯದ ನಿಷ್ಕರ್ಷೆಯಾಗಬೇಕು.

ಎಲ್ಲರೂ—ಹೌದು ಹೌದು.

ಶ್ರೀರಂಗ—(ಸ್ವಲ್ಪ ಸುಮ್ಮನಿದ್ದು) ಹಾಗಾದರೆ ಆಗಲಿ, ವಿಚಾರಿಸೋಣ.

ತಲಕಾಡು—ಇನ್ನೊಂದು ಅರಿಕೆಯಿದೆ ಪ್ರಭು. ನಮ್ಮ ಪಾಳೆಯಗಳಲ್ಲಿ ರಾಜಒಡೆಯರ ಬಾಧೆ ಹೇಳತೀರದು. ತಾನೇ ಚಕ್ರಾಧಿಪತಿಯ ಹಾಗೂ ನಾವೆಲ್ಲಾ ತನ್ನ ಸಾಮಂತರ ಹಾಗೂ ತಿಳಿದಿರುವ ಹಾಗಿದೆ.

ಶ್ರೀರಂಗ—ಇದು ನಿಜವೇನು.

ಉಮ್ಮಚವಾಡಿ—ನಿಜ. ದಂಡೆತ್ತಿ ಒಂದು ಕಪ್ಪವನ್ನು ಕೇಳುತ್ತಾನೆ. ಕೊಡುವುದಿಲ್ಲವೆಂದರೆ ಕೊಳ್ಳೆಹೊಡೆಸುತ್ತಾನೆ. ಕ್ಷಾಮಬಾಧೆಯಲ್ಲಿ ಜನಗಳು ನರಳುತ್ತಿದ್ದಾರೆ. ತಮ್ಮ ಪಾದಕ್ಕೆ ಸಲ್ಲಿಸಬೇಕಾದ ಕಪ್ಪವನ್ನು ಕೂಡ ಸಲ್ಲಿಸುವುದಕ್ಕೆ ನಮಗೆ ಚೈತನ್ಯವಿಲ್ಲದಿರುವಾಗ ಅವನ ಕೋಟಲೆಯಂತೂ ಹೇಳತೀರದು.

ಶ್ರೀರಂಗ—ಇದನ್ನೆಲ್ಲಾ ನಮಗೇಕೆ ತಿಳಿಸಿರಲಿಲ್ಲ.

ತಲಕಾಡು—ತಮ್ಮವರೆಗೂ ಈ ವಿಷಯವನ್ನೇಕೆ ತರಬೇಕೆಂದು ಸುಮ್ಮನಿದ್ದೆವು.

ಶ್ರೀರಂಗ—ಇರಲಿ. ಅದನ್ನೂ ವಿಚಾರಿಸೋಣ.

ವೀರರಾಜಯ್ಯ—ಮಹಾಪ್ರಭು, ನನ್ನ ಅರಿಕೆಯು ತಮಗೆ ಮನದಟ್ಟಾಗಬೇಕು. ಮಹಾಸ್ವಾಮಿಯವರ ಮಾಂಡಲಿಕನಾದ ನನ್ನ ಮೇಲೆ

ಯುದ್ಧ ಮಾಡಿ ರಾಜಒಡೆಯರು ಬಹಳ ನಷ್ಟವಾಡಿದಾರೆ. ಪ್ರತಾಪಶಾಲಿಗಳೂ, ವಿಖ್ಯಾತರೂ, ವಿಜಯನಗರ ಸಿಂಹಾಸನದ ಸಾಕ್ಷಾತ್ ಪ್ರತಿನಿಧಿಗಳೂ ಆದ ತಮ್ಮ ಗರ್ಭವಾಸದಲ್ಲಿದ್ದೂ ಸಹ ನಾವು ಹೀಗೆ ಬವಣೆಪಡಬೇಕಾಗಿದೆ. ಈಗ ನನಗಾಗಿರುವ ನಷ್ಟವನ್ನು ಕೂಡಿಸಿ ಅವನಿಗೆ ತಕ್ಕ ಎಚ್ಚರಿಕೆಯನ್ನು ಕೊಡಬೇಕು.

ಶ್ರೀರಂಗ—ವೀರರಾಜಯ್ಯ, ನಿಮ್ಮ ಈ ಯುದ್ಧದ ವಿಚಾರದಲ್ಲಿ ರಾಜಒಡೆಯರದೇನೂ ಅನ್ಯಾಯವಿದ್ದ ಹಾಗೆ ಕಾಣಲಿಲ್ಲ. ರಾಜಒಡೆಯರಿಲ್ಲದ ವೇಳೆಯಲ್ಲಿ ನೀವಾಗಿ ಮಹಿಸೂರಿನ ಮೇಲೆ ದಂಡೆತ್ತಿಹೋಗಿ ಬೆಟ್ಟದ ಚಾಮರಾಜರಿಂದ ಪರಾಜಿತರಾದಿರಿ ಎಂದು ನಮಗೆ ತಿಳಿಯಬಂತು.

ವೀರ—ಮಹಾಸ್ವಾಮಿಯವರ ಸಿಂಹಾಸನದ ಮೇಲಿನ ಅಭಿಮಾನದಿಂದ ಹಾಗೆ ಮಾಡಿದೆ ಪ್ರಭೂ. ತಮಗೆ ಸೇರಿದ ದೊರೆಗಳನ್ನು ಅವನು ಗೋಳಾಡಿಸುತ್ತಿದ್ದರೆ ತಮ್ಮ ಸೇವಕನಾಗಿ ನಾನು ಸುಮ್ಮನಿರಲಾದೀತೆ. ಅದರಿಂದ ದಂಡೆತ್ತಿ ಹೋದೆ.

ಶ್ರೀರಂಗ—ಈ ವಿಚಾರದಲ್ಲಿ ನಾವು ಪ್ರವೇಶ ಮಾಡಬಾರದು.

ತಲಕಾಡು—ಇದನ್ನು ತಾವು ವಿಚಾರಿಸಲೇಬೇಕು ಪ್ರಭೂ. ಇದು ನಮ್ಮೆಲ್ಲರಿಗೂ ಸೇರಿದ ಪ್ರಶ್ನೆ.

(ರಾಜಒಡೆಯರು ಮತ್ತು ಜ್ಯೋತಿಷಿ ಪ್ರವೇಶಿಸುವರು. ಕೈವಾರಿಗಳು ಮುಂತಾದವರು ಬಾಗಿಲಲ್ಲೇ ನಿಲ್ಲುವರು.)

ಶ್ರೀರಂಗ—ಅಗೋ ರಾಜಒಡೆಯರೂ ಬಂದರು. ದಯಮಾಡಿ ರಾಜಒಡೆಯರೆ. ಇತ್ತಕಡೆ ಕುಳಿತುಕೊಳ್ಳಿ.

(ರಾಜಒಡೆಯರು ಸಿಂಹಾಸನದ ಬಲಭಾಗದಲ್ಲಿದ್ದ ಒಂದು ಆಸನದ ಮೇಲೆ ಕುಳಿತುಕೊಳ್ಳುವರು)

ನಿಮ್ಮ ಒಳ ಎಲ್ಲರೂ ಸೌಖ್ಯವೋ. ಪ್ರಯಾಣವು ಸುಗಮವಾಗಿ ನಡೆಯಿತುತಾನೆ.

ರಾಜಒಡೆಯರು—ದೇವರ ಅನುಗ್ರಹದಿಂದ.

ಶ್ರೀರಂಗ—ಈ ಉತ್ಸವಕಾಲಕ್ಕೆ ತಾವು ಬಂದುದು ಬಹಳ ಸಂತೋಷ. ಆದರೆ........

ರಾಜ—ಏನು ?

ಶ್ರೀರಂಗ—ಏನೂ ಇಲ್ಲ. ಬೆಟ್ಟದ ಚಾಮರಾಜಒಡೆಯರು ಬಂದ ಹಾಗೆ ಕಾಣೆ.

ರಾಜ—ಇಲ್ಲ. ಅವರು ಬರುವುದಕ್ಕೆ ಸ್ವಲ್ಪ ಅನಿವಾರ್ಯವಾಯ್ತು.

ಶ್ರೀರಂಗ—ಓ, ಸಂತೋಷ. (ತಡೆದು ತಡೆದು) ತಾವು ಇಲ್ಲಿಗೆ ಬರುವಾಗ ವಾದ್ಯಗಳನ್ನು ನಿಲ್ಲಿಸಿ ಹಾಗೆಯೇ ಬಂದಿರಂತೆ.

ರಾಜ—ಹೌದು.

ಶ್ರೀರಂಗ—ಅದೇಕೆ ಹಾಗೆ ಮಾಡಿದಿರಿ. ವಾದ್ಯಸಮೇತ ಬರುವುದು ಹೆಚ್ಚಿನ ಮರ್ಯಾದೆಯಲ್ಲವೆ.

ರಾಜ—ಹೆಚ್ಚಿನ ಮರ್ಯಾದೆ. ಕೆಂಬಾಳದಂತಹ ಕೀಳು ಪಾಳೆಯಗಾರರು ಸಹ ವಾದ್ಯದಿಂದ ಬರುವುದಾದರೆ ಅಂತಹ 'ಹೆಚ್ಚಿನ ಮರ್ಯಾದೆ'ಯು ನಮಗೆ ಬೇಡ.

ನಂಜಯ್ಯ—(ಎದ್ದು) ಕೆಂಬಾಳದವನು ಕೀಳು ಪಾಳೆಯಗಾರನೆ. ಆಡುವ ಮಾತಿಗೆ ಮೇರೆಯಿರಲಿ.

ರಾಜ—ಮಾತಿನ ಮೇರೆಯನ್ನು ನಾವು ಬಲ್ಲೆವು.

ನಂಜಯ್ಯ—ಉಹ್ಞೂ. ಹಾಗಾದರೆ ನಮಗಿಂತಲೂ ನೀನು ಮೇಲೆಂಬ ಹೆಮ್ಮೆಯಿದೆಯೋ. ಮಹಿಸೂರು ವೀರ ಸೊಕ್ಕೆಂದು ಕಾಣುವುದು.

(ಜ್ಯೋತಿಲನು 'ಏನು' ಎಂದು ಕಟಿಗೆ ಕೈಯಿಟ್ಟು ಮುಂದೆ ನುಗ್ಗುವನು.)

ರಾಜ—(ಅವನನ್ನು ತಡೆದು) ಜ್ಯೋತಿಲ. ಸೊಕ್ಕು ತೋರಿಸುವುದಕ್ಕೂ ಸೊಕ್ಕಡಗಿಸುವುದಕ್ಕೂ ಸ್ಥಳವು ಆಸ್ಥಾನವಲ್ಲ.

ಶ್ರೀರಂಗ—ರಾಜಒಡೆಯರೆ, ಸಂಜಯ್ಯನವರೆ. ಹೀಗೆ ಸಿಟ್ಟಿಗೇಳುವ್ರುದುಂಟೆ. ಸಮಾಧಾನರಾಗಿ.

ನಂಜಯ್ಯ—ಸಿಟ್ಟಿಗೆದ್ದಿರುವವರು ನಾವಲ್ಲ ಪ್ರಭು. ಕಾಲು ತೆಗೆದು ಜಗಳಕ್ಕೆ ಬರುವವನು ಯಾವಾಗಲೂ ಮಹಿಸೂರಿನವನೇ.

ಕನ್ನಂಬಾಡಿ—ಹೌದು ಪ್ರಭು.

ಉಮ್ಮಚವಾಡಿ—ನಿಜವಾದ ಮಾತು. (ಜ್ಯೋತಿಲನು ಹಲ್ಲು ಕಡಿಯುತಿರುವನು)

ರಾಜ—(ನೋಡಿ ತಲಿದೂಗಿ) ಶ್ರೀರಂಗರಾಯರೆ! ಕೆಂಬಾಳದವನಿಗೆ ವಾದ್ಯ ಮರ್ಯಾದೆಯನ್ನು ಕೊಟ್ಟವರು ಯಾರು.

ಶ್ರೀರಂಗ—ಏಕೆ.

ರಾಜ—ಅದನ್ನು ನೀವು ಕೊಟ್ಟಿರಲಾರಿರಿ. ಹಾಗೆ ಕೊಡುವುದಕ್ಕೆ ಕಾರಣವಿಲ್ಲ.

ಶ್ರೀರಂಗ—ಯಾರು ಕೊಟ್ಟರೆ ಏನು ರಾಜಒಡೆಯರೆ. ಅದರಲ್ಲಿ ದೋಷವೇನಿದೆ.

ರಾಜ—ದೋಷವಿದೆ. ವಿಜಯನಗರ ಸಿಂಹಾಸನದ ಮಾಂಡಲಿಕರಲ್ಲೆಲ್ಲಾ ನಮಗೊಬ್ಬರಿಗೆ ಮಾತ್ರವೇ ಈ ಮರ್ಯಾದೆಯು ಸಲ್ಲಬೇಕಾದುದು. ಈ ವಿಚಾರವು ನಿಮಗೆ ತಿಳಿಯದೆ ಇಲ್ಲ. ಇನ್ನು ಯಾರೊಬ್ಬರಿಗೆ ಅದನ್ನುಂಟುಮಾಡಿಕೊಟ್ಟರೂ ನಮ್ಮ ಗೌರವಕ್ಕೆ ಕಳಂಕವಿಟ್ಟ ಹಾಗೆ.

ಶ್ರೀರಂಗ—ನಿಮ್ಮ ವಾದ್ಯಗಳು ನಿಮ್ಮ ಮರ್ಯಾದೆಗಾಗಿ. ಅವರ ವಾದ್ಯಗಳು ಅವರ ಮರ್ಯಾದೆಗಾಗಿ, ಇದರಲ್ಲಿ ಅಂತರವೇನೂ ನಮಗೆ ಕಾಣುವುದಿಲ್ಲ. ಇದಕ್ಕೇಕೆ ಇಷ್ಟು ವ್ಯವಹಾರ.

ರಾಜ—ಹಾಗೋ! ವ್ಯವಹಾರ ಮಾಡಬೇಕೆಂದಾಗಲಿ ಕಲಹಮಾಡ ಬೇಕೆಂದಾಗಲಿ ನಾವಿಲ್ಲಿಗೆ ಬಂದವರಲ್ಲ. 'ದೇವರ ಉತ್ಸವ ವನ್ನು ಮಾಡಿಸುತ್ತೇವೆ, ನೀವು ಬರಲೇಬೇಕು' ಎಂದು ಒತ್ತಾಯ ಮಾಡಿ ಬರೆದುದರಿಂದ ಇಲ್ಲಿಗೆ ಬರಬೇಕಾಯಿತು. ಬಂದ ಕೆಲಸ ವಾಯಿತು. ಜೊತೆಗೆ ಇದುವರೆಗೆ ತಿಳಿಯದೆ ಇದ್ದ ಒಂದು ಹೊಸ ವಿಚಾರವೂ ತಿಳಿದ ಹಾಗಾಯಿತು. ನಮ್ಮ ಮರ್ಯಾದೆಯೇ ಶ್ರೀರಂಗರಾಯರ ಮರ್ಯಾದೆ ಎಂದು ನಾವಿದುವರೆಗೆ ಭಾವಿ ಸಿದ್ದುದು ತಪ್ಪು. ಬರುತ್ತೇವೆ. ಇನ್ನು ಮೇಲೆ ಇಂತಹ ಉತ್ಸವ ಗಳಿಗೆ ನಮ್ಮನ್ನು ಕರೆಸಬೇಡಿ. ಬರೆದು ಅದರಿಂದ ವಿಷಾದಪಡ ಬೇಕಾದುದಿಲ್ಲ.

ಬಾಗಿಲಲ್ಲಿ ಹೊಗಳಭಟರು—"ಸಮಸ್ತ ಸಾಮಂತ ಮಹೀಪಾಲ ಮೌಳಿ ಮಾಲಾ ಲಾಲಿತಪದರಾಜೀವ! ರಾಜೀವಸಖ ಗರ್ವ ಸರ್ವಸ್ವ ನಿರ್ವಾಪಣಚಣ ಪ್ರತಾಪೋದಯ! ದಯಾರಸ ತರಂಗಾಯಿತಾ ಪಾಂಗಾವಲೋಕನಾಪ್ಯಾಯಿತಕರ್ಣಾಟಕ ಮಂಡಳ ಮಂಡ ಲಾಗ್ರ ಖಂಡಿತಾರಾತಿ ನೃಪಕಂಠ ಕಾಂಡೋಚ್ಚಲದ್ರಕ್ತಧಾರಾ ಪರಿಮೃಷ್ಟ ತದೀಯಬಿರುದ! ಬಿರುದಂತೆಂಬರಗಂಡ! ರಾಜನೃಪ! ವಿಜಯೀಭವ! ದಿಗ್ವಿಜಯೀಭವ" *

* ಚಿಕ್ಕದೇವರಾಯ ವಂಶಾವಳಿಯಿಂದ ಉದ್ಧೃತವಾದುದು.

ವೀರ—(ಹಲ್ಲು ಕಡಿದು) ಬಿರುದಂತೆಂಬರಗಂಡ! ವಿಜಯನಗರ ಸಿಂಹಾಸನದ ಮುಂದೆ ನಮ್ಮಂತಹ ಕಡುಗಲಿಗಳ ಮುಂದೆ ಇವನು ಬಿರುದಂತೆಂಬರಗಂಡನೆ!

ನಂಜಯ್ಯ—ಪ್ರಭೋ! ಈ ಹೊಗಳಿಕೆಯು ಸಿಂಹಾಸನಕ್ಕೆ ಅಗೌರವ ಮಾಡಿದ ಹಾಗೆ. ಅದನ್ನು ತೆಗೆದುಹಾಕುವಂತೆ ಅಪ್ಪಣೆಯಾಗ ಬೇಕು.

(ಜ್ಯೋತಿಲನು ಅಸ್ವಸ್ಥನಾಗಿ ದುರುಗುಟ್ಟಿಕೊಂಡು ನೋಡುತ್ತಿರುವನು)

ಶ್ರೀರಂಗ—ಹೌದು. ಹೆಚ್ಚಿನ ಬಿರುದೇನೋ ನಿಜ. ಆದರೆ....

ರಾಜ—(ಅಷ್ಟರಲ್ಲಿ) ಏನು! ಬಿರುದನ್ನು ತೆಗೆಯುವುದು, ಹೆಚ್ಚಿನ ಬಿರುದು! ಇದು ವೈತಾಳಿಕರಿಗೆ ಬೆಲೆ ಕೊಟ್ಟು ಕೊಂಡ ಬಿರುದಲ್ಲ. ಎದುರಾಳರಸರ ಮದವನ್ನು ಮುರಿದು ಸೂರೆಗೊಂಡಿರುವುದು. ನಮ್ಮ ಹಿರಿಯರಿಂದಲೂ ನಡೆದು ಬಂದಿರುವುದು.

ನಂಜಯ್ಯ—ಪಾಪ! ಪಿತ್ರಾರ್ಜಿತ ಸ್ವತ್ತು. ಹೇಗೆ ಕಳೆದುಕೊಳ್ಳುವುದೆಂಬ ಸಂಕಟವೇನೋ.

ರಾಜ—ಛೆ! ಕುನ್ನಿಗಳೆದುರಿಗೆ ಸಾಟಿಯೇನೆಂದು ಸುಮ್ಮನಿದ್ದರೆ ಮಾತಿಗೆ ಮಿತಿಯೇ ಬೇಡವೆ. ಜ್ಯೋತಿಲ! ನಾಳೆಯ ದಿನ ನಾವು ಕೆಂಬಾಳವನ್ನು ಮುತ್ತುತ್ತೇವೆಂದು ಅವನಿಗೆ ತಿಳಿಸು.

ನಂಜಯ್ಯ—(ನಕ್ಕು) ಬಹಳ ಹೆದರಿಕೆಯಾಯಿತು.

(ರಾಜಒಡೆಯರು ಹೊರಟುಹೋಗುವರು. ಎಲ್ಲರೂ ಭ್ರಾಂತರಾಗಿ ಅತ್ತಲೇ ನೋಡುತಿರುವರು)

## ಸ್ಥಾನ ೩—ಶ್ರೀರಂಗಪಟ್ಟಣದ ಅರಮನೆಯ ಭಾಗ

(ರಂಗ, ಮಾದ ಎಂಬ ಇಬ್ಬರು ಸೇವಕರು ಮಾತಾಡುತ ಬರುತ್ತಿರುವರು. ಅವರಲ್ಲಿ ಮಾದ ಶ್ರೀರಂಗರಾಯರ ಸೇವಕ, ರಂಗ ಶ್ರೀರಂಗರಾಯರ ಸೇವೆಯಲ್ಲಿರುವ ಮಹಿಸೂರಿನ ಗೂಢಚಾರ.)

ರಂಗ—ಸುದ್ದಿ ಕೇಳಿದೆಯಾ ಮಾದಾ.

ಮಾದ—ಯಾವ ಸುದ್ದಿ.

ರಂಗ—ಮೈಸೂರು ದೊರೆಗಳಿಗೂ ಸಂಜಯ್ಯಂಗೂ ಆಸ್ತ್ಯಾಸದಾಗ್ ನಡದ್ದು.

ಮಾದ—ಓ! ಆಗಲೇ ಏಟು ದಿಸದ ಸುದ್ದಿ, ಏನುಕತೆ. ಸದ್ಯ ಇವ ರಿವರು ಕಿತ್ತಾಡೋದು ಅಂಗಿರಲಿ ನಮುಕ ಬರ್ತೈತೆ ಪ್ರಾಣಕೆ.

ರಂಗ—ಹೌದು, ಹೌದು! ಈಗ ಸಂಜಯ್ಯಂಗೂ ಮೈಸೂರು ದೊರೆ ಗಳಿಗೂ ಯುದ್ಧ ಆತಾದೆ ಅನ್ನು. ಅದ್ರಾಗೆ ನಮ್ಮ ದೊರೆಗಳೇನಾ ಸಾಯುಕೆ ಹೋದ್ರೆ ನಮುಕೆಲ್ಲಾ ಬರಲ್ವಾ ಸಿಡಿ.

ಮಾದ—ಅದೆಲ್ಲೈತಣ್ಣಯ್ಯ ಇನ್ನಾ ಆ ಯುದ್ಧ! ಅದು ಆಗೋ ಯ್ತಲ್ಲ ಆಗ್ಲೇ.

ರಂಗ—ಯಾವ್ದು ಕೆಂಬಾಳದ ಯುದ್ಧಾನಾ.

ಮಾದ—ಓ! ಅದಾಗಿ ಆಗ್ಲೇ ಮೂರು ದಿನ ಆತು. ಸಂಜಯ್ಯ ಆದಿನ ಓಟು ಜಂಬ ಮಾಡಿದ ಒಡ್ಡೀ ಆಳು ಸೋತುಬಿಟ್ಟು ಕಾಡೂ ಮೇಡೂ ಬಿದ್ದು ಇಲ್ಲಿ ಬಂದು ಸೇರವ್ನೆ.

ರಂಗ—ಎಲೆಲೆ! ಏಟು ಗಾಡ ಆಗೋಯ್ತೋ!

ಮಾದ—ಯುದ್ಧ ಕೋಬ್ಕೇಕೂಂತ ಸೇನಿನ್ನಾ ಕತ್ತಿಮಸೀತಾ ಇದ್ದೇನೊ ಮನ್ಯಾಗೆ.

ರಂಗ—ನಾನಾ! ಸೂರ. ಅದಿರ್಩ಲಿ, ನಂಜಯ್ಯ್ಯನ ಒಳೀಕೆ ಬಿಟ್ಕ್ಟು ಕೊಂಡ್ರಾ ದೊರೆಗಳು.

ಮಾದ—ಬುಟ್ಕ್ಟುಕೊಳ್ದ್ದಿ ಏನು ಮಾಡುತಾರೆ: ಪಾಪ, ಸುಮ್ಕೆ ಇದ್ದವ್ನ ಅವತ್ತು ಎತ್ತಿಕಟ್ಟಿ ರಾಜ್ಯಾವ್ರ ಕಳೀಲಿಲ್ವಾ.

ರಂಗ—ಅಲ್ವ್ಲೋ, ನಂಜಯ್ಯಂಗೆ ದೊರೆಗಳು ಆಸರಾ ಕೊಟ್ಟವ್ರೇಂತ ತಿಳಿದ್ರೆ ಮೈಸೂರನೋರು ಸುಮ್ಕೆ ಬಿಟ್ಟಾರೇನೋ.

ಮಾದ—ಎಂಗನ್ನಾ ಆಗ್ಲೇಳು. ನಂಗೂ ನಿಂಗೂ ಏನೀಗ. ಹೇಳಿದ ಸಾಕ್ರಿ ಬಡಿಯೋದು ಏಟೋ ಓಟು ತಾನೆ. ಈಗ ನೋಡು, ಈಟು ದಿನಾಸೂ ಮೂರನೆ ಬಾಕಿಲ್ತಾವಿರು ಅಂದ್ರು. ಆಗ್ಲಿ ಅಂದಿದ್ದೆ. ಇವತ್ತು ಪರದಾನಿಗಳು ಹೊತ್ಲಂಟೆ ಕರದು ನಂಜಯ್ಯ ನೋರತಾವ ಇರು ಅಂದ್ರು. ಅದಕೂ ಆಗ್ಲಿ ಅಂದೆ. ನಾಳೆ ಇನ್ನೇನಾರಾ ಏಳಿದ್ರೆ ಅದೂ ಮಾಡಬೇಕು.

ರಂಗ—ನಿಂಗ ಬಿಡಪ್ಪ. ಒಂದಕಿಂತ ಒಂದು ಒಂದಕಿಂದ ಒಂದು ಒಳ್ಳೇ ಸಾಕರೀನೇ ಸಿಗುತ್ತೈತೆ. ಆ ಸಿಡಿಮುದ್ದಿನ ತಾವ ಇನ್ನು ಮೇಲೆ ಎಂಗೆ ಬೇಯ್ತ್ತೀಯೋ ಏನೋ.

ಮಾದ—ಸುಮ್ಕಿರಪ್ಪಾ ನಿನ್ನ ದರ್ಮ. ಯಾರೋ ಬರ್ತಾ ಅವ್ರೆ. ಯಾರನ್ನಾ ಕೇಳಿಸಿಗೀಳಿಸಿಕೊಂಡಾರು.

ರಂಗ—ದೊರೆಗಳು ಬರ್ತವ್ರೆ ಕಣೋ. ಇತ್ತಲೇ ಹೋಗಾನ ಬಾ.

ಮಾದ—ನಡೀನಡೀ ಓಗಾನ.

(ಶ್ರೀರಂಗರಾಯರೂ ನಂಜಯ್ಯನೂ ಪ್ರವೇಶಿಸುವರು.)

ಶ್ರೀರಂಗ—ಇಷ್ಟೂ ಆಯಿತೆ ನಂಜಯ್ಯ.

ನಂಜಯ್ಯ—ಆಯಿತು ಪ್ರಭೂ. ಹೇಳಿಕೊಳ್ಳುವುದಕ್ಕೆ ನಾಚಿಕೆಯಾಗುತ್ತದೆ.

ಶ್ರೀರಂಗ—ಪರಿಸ್ಥಿತಿಯು ಹೀಗಾಗಬಹುದೆಂದು ನಾವು ಯೋಚಿಸಲಿಲ್ಲ.

ನಂಜಯ್ಯ—ನನಗೂ ಇದು ತಿಳಿಯಲಿಲ್ಲ.

ಶ್ರೀರಂಗ—ಏನೋ ಗ್ರಹಗತಿ ಸರಿಯಾಗಿಲ್ಲ. ಇಲ್ಲದಿದ್ದರೆ ನಿಮ್ಮ ಜನರು ಸೋಲುವುದೆಂದರೇನು.

ನಂಜಯ್ಯ—ಸೋತುದಂತೂ ಆಯಿತಲ್ಲ. ಮುಂದೇನುಮಾಡಲಿ ಪ್ರಭು.

ಶ್ರೀರಂಗ—ಏನು ಮಾಡುತ್ತೀರಿ.

ನಂಜಯ್ಯ—ನನಗೆ ತಿಳಿಯದು. ನಿಮ್ಮವರು ಕೊಟ್ಟ ರಾಜ್ಯ. ನೀವು ನಡೆಸಿಕೊಂಡು ಬಂದಿರುವುದು. ಈಗ ಅದನ್ನು ಉಳಿಸಿಕೊಡುವುದೂ ಬಿಡುವುದೂ ನಿಮ್ಮ ಭಾರ.

ಶ್ರೀರಂಗ—ನಿಜ ನಂಜಯ್ಯನವರೆ, ಆದರೆ........

ನಂಜಯ್ಯ—ಆದರೆ ಏನು.

ಶ್ರೀರಂಗ—ರಾಜಒಡೆಯರು ನಮಗೆ ಯಾವ ವಿಧವಾಗಿಯೂ ಪ್ರತಿಭಟಿಸಿಲ್ಲ. ನೀವು ಹೇಗೆ ಅನುಕೂಲರೋ ಅವರೂ ಹಾಗೆಯೇ ನಮಗೆ ಅನುಕೂಲರಾಗಿದಾರೆ. ನಿಷ್ಕಾರಣವಾಗಿ ಅವರ ಮೇಲೆ ನಾವು ಕೈಮಾಡಬಾರದಲ್ಲವೆ, ಹೇಳಿ.

ನಂಜಯ್ಯ—ಪ್ರತಿಭಟಿಸಿಲ್ಲವೆ ಪ್ರಭು. ನಿಮ್ಮ ದಯಾಮಯವಾದ ಸರಳಹೃದಯಕ್ಕೆ, ಅವರು ಮಾಡಿರುವ ಅಗೌರವವು ತಟ್ಟಲಿಲ್ಲವೇನೋ.

ಶ್ರೀರಂಗ—ಅಗೌರವವೇನು ?

ನಂಜಯ್ಯ—ನನ್ನ ಸೇವೆಯಿಂದ ಸಂತುಷ್ಟರಾದ ತಾವು ನನಗೆ ವಾದ್ಯ ಮರ್ಯಾದೆಯಿರಬಹುದೆಂದು ಅಪ್ಪಣೆ ಮಾಡಿರಲಿಲ್ಲವೆ.

ಶ್ರೀರಂಗ—ಹೌದು.

ನಂಜಯ್ಯ—ಈ ಅಪ್ಪಣೆಯನ್ನು ಅವನು ಧಿಕ್ಕಾರ ಮಾಡಿದಮೇಲೆ ತಮ್ಮ ಮಾತಿಗೆ ಇನ್ನೂ ಬೆಲೆ ಕೊಟ್ಟಂತಾಯಿತೆ.

ಶ್ರೀರಂಗ—ಹಾಗಲ್ಲ ಸಂಜಯ್ಯ. ತಿಳಿದೋ ತಿಳಿಯದೆಯೋ ಅವರು ನಿಮ್ಮ ಮೇಲೆ ಸಿಟ್ಟುಗೊಂಡುದು ನಿಜ. ನಮಗೆ ಅಗೌರವ ಮಾಡಬೇಕೆಂದು ಅವರಿಗೆ ಇಷ್ಟವಿದ್ದ ಹಾಗೆ ಕಾಣೆವು. ಈಗ ಮುಂಚಿಹೋದುದೇನು. ಕರೆಸಿ ಒಂದು ಮಾತು ಹೇಳಿದರೆ ಒಪ್ಪಿಕೊಳ್ಳುತಾರೆ.

ನಂಜಯ್ಯ—ಆದಿನ ಸಭೆಯಲ್ಲಿ ನಡೆದುದು ತಮಗೆ ಮರೆತುಹೋಯಿತೇನೋ. ಇಷ್ಟಾಗಿ ಅವನು ಒಪ್ಪಿಕೊಂಡು ಆಗಬೇಕಾದುದೇನು, ಆಗುವ ಅವಮಾನವಂತೂ ಆಯಿತು. ನನ್ನ ಮಟ್ಟಿಗೆ ನಾನು ಎಲ್ಲಿಯೋ ತೆಪ್ಪಗಿದ್ದೆ. ನನ್ನ ಕೈಲಾದ ಹಾಗೆ ತಮ್ಮ ಸೇವೆ ಮಾಡಿಕೊಂಡು ಹೋಗುತಿದ್ದೆ. ಯಾವುದೋ ಕೆಲಸಕ್ಕೆ ಬಾರದ ಗೌರವವನ್ನು ಕೊಟ್ಟು ನನ್ನನ್ನೂ ಹಾಳುಮಾಡಿ ತಮ್ಮ ಗೌರವವನ್ನೂ ಕಳೆದುಕೊಂಡಿರಿ.

ಶ್ರೀರಂಗ—ಅಸಮಾಧಾನಪಡಬೇಡಿ ಸಂಜಯ್ಯ. ಎಲ್ಲವೂ ಸರಿಹೋಗುತ್ತದೆ. ಅಂದಿನ ಸಭೆಯಲ್ಲಿ ನೀವು ಅಷ್ಟು ಸಿಟ್ಟಾಗಬಾರದಾಗಿತ್ತು.

ನಂಜಯ್ಯ—ಪ್ರಭೂ, ತಾವು ಹೀಗೆ ಅಪ್ಪಣೆ ಕೊಡಬಾರದು. ವಿಜಯನಗರ ಸಿಂಹಾಸನಕ್ಕೆ ಅಪಮಾನವಾಗುತ್ತಿರುವಾಗ ನಾನು ನೋಡಿ ಹೇಗೆ ಸಹಿಸಲಿ.

ಶ್ರೀರಂಗ—(ನಕ್ಕು) ನಮ್ಮ ಸಿಂಹಾಸನಕ್ಕೆ ಯಾರು ಸಂಜಯ್ಯ ಅಪಮಾನ ಮಾಡುವಂತಹವರು.

ನಂಜಯ್ಯ—ಸ್ವಾಮಿಯವರ ಪ್ರತ್ಯಕ್ಷದಲ್ಲಿಯೇ ಆಗಿದೆ. ಸಭಿಕರೂ ಸಾಮಂತರೂ ಕೇಳಿ ಆಡಿಕೊಂಡು ನಗುವಂತಾಗಿದೆ.

ಶ್ರೀರಂಗ—(ಕೆರಳಿ) ಏನು !

ನಂಜಯ್ಯ—ಹೌದು ಪ್ರಭೂ, ತುಂಬಿದ ಸಭೆಯಲ್ಲಿ 'ಬಿರುದಂತೆಂಬರ ಗಂಡ'ನೆಂದು ಅವನು ಹೊಗಳಿಸಿಕೊಂಡಾಗ ತಮ್ಮ ಬಿರುದುಗಳಿನ್ನೂ ಉಳಿದುವೇನು ? ಅಂದು ಬಿರುದುಗಳ ಸೂರೆಯಾಯಿತು. ಹಿಂದೆಯೇ ಸ್ವಾಮಿಯವರ ಮಾನ್ಯ ಸಾಮಂತರೊಬ್ಬೊಬ್ಬರನ್ನೂ ದಿಕ್ಕುಗೆಡಿಸುವುದು, ಕೊನೆಗೆ ಆಗುವುದೇನು—ಸಿಂಹಾಸನದ ಆಕ್ರಮಣ.

ಶ್ರೀರಂಗ—ನಂಜಯ್ಯ !

ನಂಜಯ್ಯ—ಶ್ರೀರಂಗರಾಯರ ಕಾಲದಲ್ಲಿ ವಿಜಯನಗರ ಸಿಂಹಾಸನದ ಪ್ರಾತಿನಿಧ್ಯವು ಶ್ರೀರಂಗಪಟ್ಟಣದಲ್ಲಿ ಕೊನೆಗಾಣಬೇಕಾಗಿದ್ದಿತೇನೋ. ವಿಧಿವಿಲಾಸವು ಹಾಗಿದ್ದರೆ ಯಾರು ಮಾಡುವುದೇನಿದೆ.

ಶ್ರೀರಂಗ—ಎಚ್ಚರಿಕೆಯಿಂದ ಮಾತನಾಡಿ ನಂಜಯ್ಯ.

ನಂಜಯ್ಯ—(ಅದನ್ನು ಲೆಕ್ಕಿಸದೆ) ಹಕ್ಕಬುಕ್ಕರು ಕಟ್ಟಿ, ಮಿಕ್ಕ ದೊರೆಗಳು ಬೆಳೆಸಿ ಉಳಿಸಿದ್ದ ರಾಜ್ಯದ ಬಲದೋಳು ಶ್ರೀರಂಗರಾಯರಿಂದ ಕಡಿದು ಬಿದ್ದಿತೆಂದು ಜನರು ಸಾರುವಂತಾಗುವುದು. ಕೃಷ್ಣದೇವರಾಯರೇ ಮೊದಲಾದ ಆಳಿದ ಸಾರ್ವಭೌಮರು ಮೇಲಿಂದ ನೋಡಿ ಕಣ್ಣೀರು ಸುರಿಸುವಂತಾಗುವುದು.

ಶ್ರೀರಂಗ—ಸಾಕು ನಿಲ್ಲಿಸಿ, ಪ್ರಜ್ಞೆತಪ್ಪಿ ಮಾತಾಡಬೇಡಿ.

ನಂಜಯ್ಯ—ಸಂಪೂರ್ಣ ಪ್ರಜ್ಞೆಯಿಂದಲೇ ಹೇಳುತ್ತಿದೇನೆ ಪ್ರಭು. ನಾನಿಲ್ಲಿ ಹೊಗಳಭಟನಲ್ಲ. ಮುಂದಿನ ಆಲೋಚನೆಯನ್ನು ತಿಳಿಸುವ ಮಂತ್ರಿಯಂತೆ ಹೇಳುತ್ತಿದೇನೆ. ನಿಮ್ಮ ಹಿತಕ್ಕಾಗಿ ಇಷ್ಟು

ಹೇಳುವುದೂ ನಿಮ್ಮ ಹಿತಕ್ಕಾಗಿ. ಮಹಿಸೂರಿನವನ ಹಂಚಿಕೆಯನ್ನು ನಾನು ಚೆನ್ನಾಗಿ ಬಲ್ಲೆ.

ಶ್ರೀರಂಗ—ಎಂದರೆ ರಾಜಒಡೆಯರೊಡನೆ ನಾವು ದ್ವೇಷ ಮಾಡಬೇಕೆ?

ನಂಜಯ್ಯ—ನೀವು ದ್ವೇಷಮಾಡಿದರೆ ನನಗೇನು, ಬಿಟ್ಟರೆ ನನಗೇನು. ನೀವು ಅವರೊಡನೆ ಜಗಳವಾಡಿ ಕೆಂಬಾಳವು ಪುನಃ ನನಗೆ ಬರಬಹುದಾದರೂ ಅಂತಹ ಹಂಗಿನ ರಾಜ್ಯವು ಬೇಡ. ಆದರೆ ಅಜಾಗರೂಕರಾಗಿ ಕೆಡುವವರು ನೀವು. ನಿಮ್ಮ ಉಪ್ಪು ತಿಂದುದರಿಂದ ನಿಮ್ಮ ಕ್ಷೇಮಕ್ಕಾಗಿ ಇಷ್ಟನ್ನೂ ಹೇಳಬೇಕಾಯಿತು. ಬೇಸರವಾಯಿತೇನೋ, ಕ್ಷಮಿಸಿ. ನನಗೆ ಅಪ್ಪಣೆ ಕೊಡಿ. ಎಲ್ಲಿಯಾದರೂ ನಿಮ್ಮ ಹೆಸರಿನಲ್ಲಿ ಜೀವಿಸಿದ್ದು ನಿಮಗೆ ಕಷ್ಟವೊದಗಿದಾಗ ನೆರವಿಗೆ ಬರುತ್ತೇನೆ.

ಶ್ರೀರಂಗ—ಹೊರಡುವುದೆಲ್ಲಿಗೆ, ನಿಲ್ಲಿ.

ನಂಜಯ್ಯ—ನಿಂತು ಮಾಡುವುದೇನು? ಪ್ರಭುಗಳ ವೈರಿಯು ಜೀವಿಸಿರುವಾಗ, ವೀರನಾಗಿ ಇನ್ನೂ ತೋಳಬಲವಿರುವಾಗ ಸುಮ್ಮನೆ ಕುಳಿತು ಶ್ವಾನಜೀವನವನ್ನು ಮಾಡಲೆ.

ಶ್ರೀರಂಗ—ನಿಮ್ಮ ಧೈರ್ಯ ನಮಗಿಲ್ಲ ನಂಜಯ್ಯ.

ನಂಜಯ್ಯ—ಆ ಧೈರ್ಯವು ಈ ಜನ್ಮದಲ್ಲಿ ಬರುವುದಿಲ್ಲ. ಬೇಕಾದಷ್ಟು ಬಲವಿದೆ, ಅಖಂಡವಾದ ಐಶ್ವರ್ಯವಿದೆ, ಸಮಸ್ತ ಪಾಳೆಯದವರ ಸಹಾಯವಿದೆ. ಇಷ್ಟಿದ್ದರೂ ಧೈರ್ಯವಿಲ್ಲದ ಮೇಲೆ ಇನ್ನೇನು. ಕೈಯಲ್ಲಿ ಚಂದ್ರಾಯುಧವಿದೆ, ಹಿಡಿಯಲು ಮಾತ್ರ ಶಕ್ತಿಯಿಲ್ಲ.

ಶ್ರೀರಂಗ—ನಮ್ಮನ್ನೂ ಆಕ್ಷೇಪಿಸುತ್ತೀರಾ.

ನಂಜಯ್ಯ—ಹೌದು, ವಿಜಯನಗರದ ವಂಶದಲ್ಲಿ ಹುಟ್ಟಿ ಧೈರ್ಯವಿಲ್ಲವೆಂದರೆ ನನಗೆ ಹೊಟ್ಟೆಯುರಿಯುತ್ತದೆ.

ಶ್ರೀರಂಗ—ಯಾರೋ ಅಲ್ಲಿ.

ಮಾದ—ಬುದ್ಧಿ.

ಶ್ರೀರಂಗ—ದಳವಾಯಿ ಚೆನ್ನಮನಾಯಕರನ್ನು ಕರೆದುಕೊಂಡು ಬಾ.

ಮಾದ—ಅಪ್ಪಣೆ. (ಹೋಗಿ ದಳವಾಯಿಯನ್ನು ಕರೆತರುವನು.)

ಶ್ರೀರಂಗ—ಚೆನ್ನಮನಾಯಕರೆ, ಮಹಿಸೂರು ಮೇಲೆ ಯುದ್ಧಕ್ಕೆ ಹೊರಡಬೇಕು. ನಂಜಯ್ಯನವರು ನಿಮ್ಮ ಜೊತೆಯಲ್ಲಿದ್ದು ಮುತ್ತಿಗೆಯಲ್ಲಿ ಸಲಹೆಗಳನ್ನು ಕೊಡುತ್ತಾರೆ.

(ದಳವಾಯಿಯು ನಂಜಯ್ಯನ ಕಡೆ ನೋಡುವನು.)

ತಿಳಿಯಿತೆ ?

ಚೆನ್ನಮನಾಯಕ—ಅಪ್ಪಣೆ ಪ್ರಭು.

ಶ್ರೀರಂಗ—ಸಾಮಂತರಾಜರು ಸಹ ಸೈನ್ಯಸಮೇತರಾಗಿ ಮಹಿಸೂರು ಬಳಿ ನಿಮ್ಮನ್ನು ಕಾಣಬೇಕೆಂದು ನಿರೂಪಗಳನ್ನು ಕಳಿಸಿ.

ಚೆನ್ನಮ—ಅಪ್ಪಣೆ.

(ನಂಜಯ್ಯನು ಸಂತೋಷವನ್ನು ಸೂಚಿಸುವನು.)

---

## ಸ್ಥಾನ ೧—ಶ್ರೀರಂಗಪಟ್ಟಣದ ಅರಮನೆ

ನಂಜಯ್ಯ—ಪ್ರಧಾನಿಗಳೆ, ನಮ್ಮ ಪ್ರಯತ್ನಗಳೆಲ್ಲಾ ಭಂಗವಾಗುತ್ತಿವೆಯಲ್ಲ. ಏಕಿರಬಹುದು.

ರಾಮಾನುಜಯ್ಯಂಗಾರ್ಯ—ದೈವಬಲ ಅತ್ತ ಕಡೆ ಇದೆ ಅಂತ ಕಾಣುತ್ತದೆ. ನಾವು ಹೊಡೆದಾಡಿದಷ್ಟೂ ನಮಗೇ ಕೇಡು.

ನಂಜಯ್ಯ—ನಿಮ್ಮ ದೈವಬಲಕ್ಕಿಂತ ಬೆಟ್ಟದ ಚಾಮರಾಜನ ಬಲ ಅವರಿಗೆ ಹೆಚ್ಚಾಗಿದೆ. ಮೊದಲು ಮೊದಲು ಏನೋ ಸಾಮಾನ್ಯನೆಂದು ತಿಳಿದಿದ್ದೆ; ಅವನು ಅಸಾಧ್ಯವೀರ. ಅವನ ಹೆಸರು ಕೇಳಿದರೆ ಮೈ ಉರಿಯುವಷ್ಟು ರೋಷವುಂಟಾಗುತ್ತದೆ. ಆದರೆ ಅವನು ಯುದ್ಧಮಾಡುವುದನ್ನೂ ಯುದ್ಧವನ್ನು ನಡೆಸುವುದನ್ನೂ ನೋಡಿದರೆ ಮುಗ್ಧನಾಗಿಬಿಡುತ್ತೇನೆ. ಸುಮ್ಮನೆ ನಿಂತು ಅವನನ್ನೇ ನೋಡಲೆ ಎನ್ನಿಸುತ್ತದೆ.

ಚೆನ್ನಮನಾಯಕ—ಬೆಟ್ಟದ ಚಾಮರಾಜನನ್ನು ತೀರಿಸಿಕೊಂಡ ಹೊರತು ನಮಗೆ ಜಯವುಂಟಾಗುವ ಭರವಸೆಯಿಲ್ಲ. ಮೊನ್ನೆ ಕೆಸರೆಯ ಕೋಟೆಯನ್ನು ಮುತ್ತಿದಾಗ ಇನ್ನೇನು ಅವನ ಕೆಲಸವಾಯಿತು ಎಂದು ತಿಳಿದಿದ್ದೆ. ಹತ್ತಾರು ಜನರನ್ನು ಮಾತ್ರ ಕೋಟೆಯೊಳಗಿಟ್ಟುಕೊಂಡು ಪಂಜರದಲ್ಲಿನ ಹುಲಿಯ ಹಾಗೆ ಒದ್ದಾಡುತ್ತಿದ್ದ. ಅಷ್ಟರಲ್ಲೇ ಬೇರೆ ಸೈನ್ಯ ಬಂದು ನಮ್ಮ ಯೋಚನೆಯೆಲ್ಲಾ ಹಾಳಾಯಿತು.

ನಂಜಯ್ಯ—ಇನ್ನೊಮ್ಮೆ ಕೈವಾಡಿ ನೋಡಿಬಿಡಬೇಕು. ಸರ್ವ ಶಕ್ತಿಯನ್ನೂ ಪ್ರಯೋಗಿಸಿ ಇಲ್ಲವೆ ಅವರುಳಿಯಬೇಕು. ಇಲ್ಲವೆ ನಾವುಳಿಯಬೇಕು.

ಚೆನ್ನಮ—ದೊರೆಗಳ ಪ್ರಾಣವು ಸ್ವಲ್ಪ ಗುಣವಾಗಲಿ, ಆಮೇಲೆ ಖಂಡಿತ ಮಾಡಬೇಕಾದ್ದೇ.

ರಾಮಾನುಜ—ಈ ಕಾಯಿಲೆಯಲ್ಲಿ ದೊರೆಗಳಿಗೆ ಏನೂ ಬೇಡವಾಗಿದೆ. ಅವರ ಮುಂದೆ ಯುದ್ಧದ ಪ್ರಸ್ತಾಪವನ್ನೇ ಈಗ ಎತ್ತಬೇಡಿ.

ನಂಜಯ್ಯ—ಅದೇನು ಅಷ್ಟು ಪ್ರಬಲವಾದ ರೋಗವೇನು.

ರಾಮಾನುಜ—ಹೌದು, ವೈದ್ಯರು ಹಾಗೇ ಹೇಳುತ್ತಾರೆ. ಅಗೋ ಸವಾರಿ ದಯಮಾಡಿಸುತ್ತಿರುವ ಹಾಗಿದೆ.

(ಶ್ರೀರಂಗರಾಯರ ಪ್ರವೇಶ)

ರಾಮಾನುಜ—ಮಹಾಸ್ವಾಮಿಯವರ ದೇಹಸ್ಥಿತಿ ಹೇಗಿದೆ.

ಶ್ರೀರಂಗರಾಯರು—ವ್ರಣದ ಬಾಧೆ ಬಹಳವಾಗಿದೆ ಪ್ರಧಾನಿಗಳೆ.

ರಾಮಾನುಜ—ಈಗ ವೈದ್ಯರನ್ನು ಕರೆಸಲೆ.

ಶ್ರೀರಂಗ—ಬೇಡ, ಇದುವರೆಗೂ ಇಲ್ಲೇ ಇದ್ದರು. ಪಾಪ, ಅವರು ತಾನೇ ಏನು ಮಾಡಿಯಾರು.

ನಂಜಯ್ಯ—ನೋವು ಕಡಿಮೆಯಾಗುವ ಹಾಗೆ ಏನಾದರೂ ಲೇಪಿಸಒಹುದು.

ಶ್ರೀರಂಗ—ಇದು ಯಾರಿಂದಲೂ ಗುಣವಾಗುವ ಗಾಯವಲ್ಲ ನಂಜಯ್ಯ. ಅಂತ್ಯಕಾಲಕ್ಕೆ ಬಂದಿರುವುದು.

ರಾಮಾನುಜ—ತಾವು ಹಾಗೆ ಹೇಳಬಾರದು ಪ್ರಭೂ.

ಶ್ರೀರಂಗ—ನಮಗೆ ಗೊತ್ತಿದೆ ಪ್ರಧಾನಿಗಳೆ. ವೈದ್ಯರು ಹೇಳುವುದಕ್ಕೆ ಹಿಂಜರಿಯುತ್ತಾರೆ. ಇದು ಬೆನ್ನುಫಣಿ, ಅಂತ್ಯಕಾಲಕ್ಕೆ ಬರುವ ರೋಗ.

ರಾಮಾನುಜ—ಹಾಗೆನ್ನಬೇಡಿ, ದೇವರು ಪಾರುಮಾಡುತ್ತಾನೆ.

ಸೇವಕ—(ಪ್ರವೇಶಿಸಿ) ಜಯವಾಗಲಿ ಮಹಾಪ್ರಭುಗಳಿಗೆ.

ರಾಮಾನುಜ—ಏನದು.

ಸೇವಕ—ಕನ್ನಂಬಾಡಿಯಿಂದ ವರ್ತಮಾನ ಬಂದಿದೆ. ಅಲ್ಲಿಯ ದೊರೆಗಳು ರಾಜಒಡೆಯರಿಗೆ ಸೋತುಹೋದರಂತೆ.

ಶ್ರೀರಂಗ—(ತಟ್ಟನೆ ತಿರುಗಿ) ಏನು ! ಏನದು !

ರಾಮಾನುಜ—ಏನೂ ಇಲ್ಲ. ತಾವು ಅಷ್ಟು ಹಚ್ಚಿಕೊಳ್ಳುವ ವಿಷಯವಲ್ಲ. (ಸೇವಕನಿಗೆ ಹೋಗಲು ಸನ್ನೆ ಮಾಡುತ್ತಾನೆ)

ಶ್ರೀರಂಗ—ನಮಗೂ ಕೇಳಿಸಿತು ಪ್ರಧಾನಿಗಳೆ. ಕನ್ನಂಬಾಡಿಯವನೂ ಸೋತುಹೋದನೆ ! (ನಂಜಯ್ಯನ ಕಡೆ ನೋಡುವರು)

ನಂಜಯ್ಯ—ತಮ್ಮ ಕಾಯಿಲೆಯ ಪ್ರಯುಕ್ತ ನಾವು ಇತ್ತ ಬಂದು ಬಿಟ್ಟೆವು. ಅವನಿಗೆ ಇತರ ಸಹಾಯವಿಲ್ಲ. ಆದರಿಂದ ಸೋತುಹೋಗಿರಬಹುದು.

ಶ್ರೀರಂಗ—ಸರಿ. ಇದ್ದ ಪಾಳೆಯಗಾರರೆಲ್ಲ ತುತ್ತಾದ ಹಾಗಾಯಿತು. ಇಷ್ಟು ದಿನಗಳಿಂದ ಒಬ್ಬರಾಗುತಲೊಬ್ಬರು ಮಹಿಸೂರಿಗೆ ಸೋತು ಹೋದರು ; ಇವನೊಬ್ಬನು ಉಳಿದಿದ್ದ. ಇವನ ಗತಿಯೂ ಆಯಿತು. ಶ್ರೀರಂಗಪಟ್ಟಣಕ್ಕೆ ಹತ್ತಿಕೊಂಡಿದ್ದ ಕೊಂಬೆಗಳೆಲ್ಲವೂ ಇಂದಿಗೆ ಸಂಪೂರ್ಣವಾಗಿ ನಾಶವಾದ ಹಾಗಾಯಿತು. ಇನ್ನು ಬುಡವೊಂದು ಮಾತ್ರ ಉಳಿದಿದೆ. ಅದೂ ಯಾವಾಗ ಕಡಿದು ಬೀಳುವುದೋ.

ನಂಜಯ್ಯ—ತಾವು ಆ ಮಾತಾಡಬೇಡಿ. ನನ್ನ ದೇಹದಲ್ಲಿ ಬಲವಿರುವ ವರೆಗೆ ಅದೆಂದಿಗೂ ಆಗದು.

ಶ್ರೀರಂಗ—ಏನು 'ಆಗದು ಆಗದು' ಎನ್ನುತ್ತಿದೀರಿ ನಂಜಯ್ಯ. ಹೀಗೆ ಹೇಳಿ ಹೇಳಿಯೇ ರಾಜ್ಯವನ್ನೆಲ್ಲಾ ಕಳೆದಾಯಿತು. ಶ್ರೀರಂಗ ಪಟ್ಟಣವೊಂದು ಬಿಟ್ಟು ಹೊರಕ್ಕೆ ಹೊರಟರೆ ನೀವೇ ಎನ್ನುವರು ದಿಕ್ಕಿಲ್ಲ. ಇನ್ನೂ ಆಗದಂತೆ ಏನೋ ಸರ್ವನಾಶ.

ರಾಮಾನುಜ. ಚೆನ್ನಮ—ಶಾಂತಂ ಪಾಪಂ.

ನಂಜಯ್ಯ—ಹಾಗೆ ನಾವು ಸೋತಿರುವುದಕ್ಕೆ ಕಾರಣಗಳಿವೆ.

ಶ್ರೀರಂಗ—ಕಾರಣಗಳೋ ಏನೋ. ಅಖಂಡವಾದ ರಾಜ್ಯವನ್ನು ನೀಗಿಕೊಂಡು ಜೀವಭಯದಿಂದ ಹಗಲೂ ರಾತ್ರಿಯೂ ಮುಳ್ಳು ಮೊನೆಯಮೇಲಿರುವುದಾಗಿದೆ. ಇಂಥದರಲ್ಲಿ ಕಾರಣ ಕಾರಣ.

ಚೆನ್ನಮ—(ಮೆಲ್ಲನೆ) ಈಗ ತಾವು ಸುಮ್ಮನಿರಿ ನಂಜಯ್ಯನವರೆ.

ನಂಜಯ್ಯ—ತಾವು ಮೊದಲಿಂದಲೂ ಹೀಗೇ ಮಾಡುತ್ತಿದೀರಿ. ನನ್ನಲ್ಲಿ ಸಂಪೂರ್ಣ ನಂಬಿಕೆಯನ್ನಿಟ್ಟು ಯಾವ ಕೆಲಸವನ್ನೂ ನಡೆಸುತಿಲ್ಲ. ನಾನೊಂದು ಕೆಲಸಮಾಡಬೇಕೆಂದರೆ ಅದಕ್ಕಾಗಲೇ ಒಂದು ಪ್ರತಿ ಹೇಳಿಯೇ ಇರುತ್ತೀರಿ. ಅದರಿಂದಲೇ ನಮಗೆ ಸೋಲಾಗುತ್ತಿರುವುದು.

ಶ್ರೀರಂಗ—ಇಲ್ಲ. ಸಂಪೂರ್ಣ ಸ್ವಾತಂತ್ರ್ಯವನ್ನೂ ನಿಮಗೆ ಬಿಟ್ಟು ಕೊಟ್ಟು ನಾವು ಕೈಕಟ್ಟಿಕೊಂಡು ಕುಳಿತಿದ್ದರೆ ನೀವು ದಂಡು ಕಡಿದು ಬಿಡುತ್ತಿದ್ದಿರಿ.

ರಾಮಾನುಜ—ಮಹಾಸ್ವಾಮಿಯವರಿಗೆ ಆಯಾಸವಾಗುತ್ತಿದೆ.

ಚೆನ್ನಮ—ನಂಜಯ್ಯನವರೆ! ದಯಮಾಡಿ........

ನಂಜಯ್ಯ—ಹಾಗೆ ಭಾವಿಸಬಾರದು ಪ್ರಭು. ಒಂದುಸಲ ಸ್ವತಂತ್ರ ವರ್ತನೆಗೆ ಅವಕಾಶಕೊಡಿ. ಬೇಕಾದ ಸಹಾಯವನ್ನು ಮಾತ್ರ ನೀವು ಮಾಡುತ್ತಿರಿ. ಆಗಿನ ಪರಿಣಾಮವನ್ನು ನೋಡುವಿರಿ.

ಶ್ರೀರಂಗ—ಇಷ್ಟು ವರ್ಷಗಳಿಂದಲೂ ಮಾಡಿ ನೋಡಿದ್ದಾಯಿತು. ಇನ್ನು ಆ ಗೊಡವೆ ಬೇಡ. ಇದ್ದ ಕಡೆಯಲ್ಲಿ ಸುರಕ್ಷಿತವಾಗಿರುವುದು ಬಿಟ್ಟು ಇಲ್ಲದ ಗೊಂದಲವೇಕೆ ನಂಜಯ್ಯ?

ನಂಜಯ್ಯ—ಗೊಂದಲವೆಬ್ಬಿಸುವುದಕ್ಕೆ ಮುಂಚೆ ಇತ್ತು ಪ್ರಭೂ ಆ ಮಾತು. ಕಿಚ್ಚು ಹತ್ತಿದಮೇಲೆ ಆರುವುದು ಕಷ್ಟ. ನೀವೀಗ ಸುಮ್ಮನಿದ್ದರೂ ವೈರಿಯು ಬಿಡುವ ಹಾಗಿಲ್ಲ. ಶ್ರೀರಂಗಪಟ್ಟಣವು ಕೈಸೇರುವವರೆಗೆ ಅವನೆಂದಿಗೂ ಸುಮ್ಮನಾಗುವುದಿಲ್ಲ.

ರಾಮಾನುಜ—ಅವರು ಹೇಳುವ ಮಾತು ನಿಜ ಪ್ರಭೂ.

ಶ್ರೀರಂಗ—ನೀವೂ ಹಾಗೆಯೇ ಹೇಳುವಿರಾ.

ರಾಮಾನುಜ—ಯಾರಾದರೂ ಹಾಗೆ ಮಾಡುವುದೇ ಸಹಜ. ಅವರ ಬಲವು ಹೆಚ್ಚಿದೆ. ನಮ್ಮ ಬಲವು ತಗ್ಗಿದೆ. ಈ ಅನುಕೂಲವನ್ನು ವೈರಿಯು ಬಿಟ್ಟು ಕೊಡಲಾರ. ನಾವೀಗ ಸಂಧಿಮಾಡಿಕೊಳ್ಳದಿದ್ದರೆ ಬಹಳ ತೊಂದರೆ ಬರುವುದು.

ನಂಜಯ್ಯ—ಸಂಧಿಯ ಮಾತೇಕೆ ಪ್ರಧಾನಿಗಳೆ?

ರಾಮಾನುಜ—ಈಗ ನಾವು ಯುದ್ಧಮಾಡುವ ಸ್ಥಿತಿಯಲ್ಲಿಲ್ಲ. ಸಂಧಿ ಮಾಡಿಕೊಳ್ಳದಿದ್ದರೆ ಶ್ರೀರಂಗಪಟ್ಟಣವನ್ನೂ ಕಳೆದುಕೊಳ್ಳಬೇಕಾಗುವುದು. ಅಲ್ಲವೆ ಚೆನ್ನಮನಾಯಕರೆ?

ಚೆನ್ನಮ—ಹೌದು. ಈಗಿನ ಪರಿಸ್ಥಿತಿಯು ಹಾಗಿದೆ.

ನಂಜಯ್ಯ—ನನಗೇನೋ ಆ ಮಾತು ಒಪ್ಪಿಗೆಯಿಲ್ಲ.

ರಾಮಾನುಜ—ಆದರೆ ಬೇರೆ ವಿಧಿಯಿಲ್ಲವಲ್ಲ.

ಶ್ರೀರಂಗ—ಹೌದು ನಂಜಯ್ಯ. ಅವರು ಹೇಳಿದಂತೆ ಸಂಧಿಮಾಡಿ ಕೊಳ್ಳುವುದೇ ಸರಿ. ದೇಹದಲ್ಲಿ ಆರೋಗ್ಯವಿಲ್ಲ, ಮನಸಿಗೆ ನೆಮ್ಮದಿ ಯಿಲ್ಲ. ಇನ್ನು ಈ ಯುದ್ಧವು ಬೇರೆ ಯಾರಿಗೆ ಬೇಕಾಗಿದೆ.

ನಂಜಯ್ಯ—ಹಾಗಾದರೆ ನನ್ನ ಮಾತನ್ನು ನಿರಾಕರಿಸಿ ಬಿಟ್ಟಿರಿ.

ಶ್ರೀರಂಗ—ಈಗ ಯುದ್ಧದ ಪ್ರಸ್ತಾಪವೇ ಬೇಡ. ಇನ್ನಾವಾಗಲಾ ದರೂ ನೋಡೋಣ.

ನಂಜಯ್ಯ—ನಿಮ್ಮಿಷ್ಟ.

ಶ್ರೀರಂಗ—ಸಂಧಿಯ ನಿಯಮಗಳನ್ನು ಯೋಚನೆಮಾಡಿ ಬಂದು ತಿಳಿಸಿ ಪ್ರಧಾನಿಗಳೆ. ನಮಗೆ ಅದರಿಂದ ತೊಂದರೆಯಾಗದಂತೆ ನೋಡಿಕೊಳ್ಳಿ. ಸಾಯಂಕಾಲದ ವೇಳೆಗೆ ಪುನಃ ಬರುವಿರಿ ತಾನೆ. ತಾವೂ ಬರಬೇಕು ದಯಮಾಡಿಗಳೆ!

ರಾಮಾನುಜ—
ಚೆನ್ನಮ—
ಅಪ್ಪಣೆ. (ಹೋಗುವರು)

(ನಂಜಯ್ಯನು ಎದ್ದು ಶತಪಥ ತಿರುಗುತ್ತಿರುವನು.)

ಶ್ರೀರಂಗ—ಮತ್ತೇನು ನಂಜಯ್ಯ.

ನಂಜಯ್ಯ—ಏನೂ ಇಲ್ಲ ಪ್ರಭು. ನನ್ನ ಹೃದಯವೆಲ್ಲಾ ಅಲುಗಾಡಿ ಹೋಗಿದೆ. ಅದನ್ನು ಸೇರಿಸಲು ಪ್ರಯತ್ನಪಡುತಿದ್ದೇನೆ ಅಷ್ಟೇ.

ಶ್ರೀರಂಗ—ಯುದ್ಧದ ಯೋಚನೆಯೇನೂ ಇಲ್ಲ ತಾನೆ.

ನಂಜಯ್ಯ—ಇಲ್ಲ. ಯುದ್ಧದ ಹಂಬಲವು ಹೋಯಿತು. ನಿಮ್ಮ ಸಂಧಿ ಪ್ರಸ್ತಾಪಕ್ಕಾಗಿ ಮಹಿಸೂರಿಗೆ ನಾನೇ ಹೊರಡಲೆ ಎಂಬ ಬುದ್ಧಿ ಹುಟ್ಟಿದೆ.

ಶ್ರೀರಂಗ—ಹಾಸ್ಯ ಮಾಡುವಿರಾ!

ನಂಜಯ್ಯ—ಹಾಸ್ಯವಲ್ಲ. ನಿಜವಾಗಿ ಹೇಳುತ್ತಿದೇನೆ. ವೈರಿಯ ರೋಷ ವಿರುವುದೆಲ್ಲಾ ನನ್ನ ಮೇಲೆ. ನಾನೇ ಕೈಕಟ್ಟಿಕೊಂಡು ಹೋದರೆ ಸಂಧಿಯ ಕೆಲಸ ಸುಲಭವಾಗಿ ಕೈಗೂಡುತ್ತದೆ.

ಶ್ರೀರಂಗ—ನಿಮ್ಮ ಮಾತೇ ಅರ್ಥವಾಗುವುದಿಲ್ಲ.

ನಂಜಯ್ಯ—ಅರ್ಥವಾಗುತ್ತದೆ. ಸಂಧಿಗಾಗಿ ನಾನೇ ಮಹಿಸೂರಿಗೆ ಹೊರಡುತ್ತೇನೆ. ತಾವು ಅಡ್ಡಿಮಾಡಬಾರದು.

ಶ್ರೀರಂಗ—ಅಡ್ಡವೇಕೆ ಬರಲಿ ?

ನಂಜಯ್ಯ—ಹೋಗುತ್ತಾ ಬರಿಗೈಯಲ್ಲಿ ಹೋಗುತ್ತೇನೆ. ಬರುತ್ತಾ ಮಹಿಸೂರ ರಾಜ್ಯವನ್ನು ತರುತ್ತೇನೆ.

ಶ್ರೀರಂಗ—ಎಂದರೆ.

ನಂಜಯ್ಯ—ನನ್ನ ಆಲೋಚನೆ ಸಫಲವಾಗಲಿ. ಕೊನೆಗಾಗಿ ಕಾದಿಟ್ಟಿದ್ದ ಒಂದು ಅಸ್ತ್ರವಿದೆ. ಈಗ ಅದನ್ನು ಬಿಟ್ಟು ಬೆಟ್ಟದ ಚಾಮರಾಜ ನನ್ನು ಇತ್ತ ಸೆಳೆದುಕೊಳ್ಳುತ್ತೇನೆ. ಅವನ ತಮ್ಮ—ಆಜನ್ಮ ಬದ್ಧವೈರಿ—ಅವನು........

ಶ್ರೀರಂಗ—ರಾಜಒಡೆಯರೆ ?

ನಂಜಯ್ಯ—ಹೌದು. ಈ ನನ್ನ ಅಸ್ತ್ರಕ್ಕೆ ಅವನು ಖಂಡಿತ ಬಲಿಯಾಗುತ್ತಾನೆ.

ಶ್ರೀರಂಗ—ಏನು ಹೀಗೆ ಮಾತಾಡುತ್ತಿದೀರಿ.

ನಂಜಯ್ಯ—ಬರುತ್ತೇನೆ ಮಹಾಪ್ರಭು. ಪುನಃ ತಮ್ಮನ್ನು ಕಾಣುತ್ತೇನೆ. (ಹೊರಡುವನು. ಶ್ರೀರಂಗರಾಯರು ಶೂನ್ಯದೃಷ್ಟಿಯಿಂದ ಅತ್ತಲೇ ನೋಡುತ್ತಿರುವರು.)

## ಸ್ಥಾನ ೨—ಮಹಿಸೂರಿನಲ್ಲಿ ನಂಜಯ್ಯನ ಬಿಡದಿ

(ನಂಜಯ್ಯ, ರಾಮಾನುಜಯ್ಯಂಗಾರ್ಯ ಮತ್ತು ವೀರರಾಜಯ್ಯ ಇವರು ಮಾತನಾಡುತ್ತ ಪ್ರವೇಶಿಸುವರು.)

ನಂಜಯ್ಯ—ನೀವಿನ್ನು ಶ್ರೀರಂಗಪಟ್ಟಣಕ್ಕೆ ಹೊರಡಿ ಪ್ರಧಾನಿಗಳೆ. ಇಲ್ಲಿ ಸಂಧಿ ನಡೆದ ಪ್ರಸ್ತಾಪವನ್ನೆಲ್ಲಾ ಶ್ರೀರಂಗರಾಯರಿಗೆ ತಿಳಿಸಿ.

ರಾಮಾನುಜ—ನೀವು ಬರುವುದು ಯಾವಾಗ.

ನಂಜಯ್ಯ—ಇನ್ನೂ ಕೆಲವು ದಿನಗಳಾಗಬಹುದು. ಇಲ್ಲಿ ನವರಾತ್ರಿಯ ಉತ್ಸವವೇನೋ ಬಹಳ ವಿಜೃಂಭಣೆಯಿಂದ ನಡೆಯುವುದಂತೆ. ಪಾಳೆಯಗಾರರೆಲ್ಲ ಬರುತ್ತಾರೆ. ಆದರಿಂದ ನಾನೂ ನಿಂತೇ ತೀರಬೇಕು ಎಂದು ಬಲವಂತ ಮಾಡುತ್ತಿದಾರೆ. ಈಗ ಹೋದು ದೇನು, ನೋಡಿಕೊಂಡು ಬರುತ್ತೇನೆ.

ವೀರರಾಜಯ್ಯ—ನೋಡಬೇಕಾದ ಉತ್ಸವ.

ರಾಮಾನುಜ—ಸರಿ, ನಿಮ್ಮನ್ನು ಅಷ್ಟು ಬಲವಂತಮಾಡಿ ನಿಲ್ಲಿಸಿ ಕೊಳ್ಳುವುದು ಹೆಚ್ಚಲ್ಲವೆ?

ನಂಜಯ್ಯ—ಹೌದು, ದೊಡ್ಡ ಮಾತು. ನನ್ನನ್ನೇ ಅಲ್ಲ; ನಿಮ್ಮನ್ನೂ ನಿಮ್ಮ ಪರಿವಾರವೆಲ್ಲವನ್ನೂ ನಿಲ್ಲಿಸಿಕೊಳ್ಳಿ ಎಂದರು. ನೀವು ಇಲ್ಲಿ ನಿಂತರೆ ಅಲ್ಲಿ ದೊರೆಗಳು ಯೋಚನೆ ಮಾಡುತಿರಬಹುದು. ಅವರ ಮೈಯಲ್ಲಿ ಬೇರೆ ಸ್ವಸ್ಥವಿಲ್ಲ. ಅಲ್ಲದೆ ರಾಜಕಾರ್ಯಗಳೂ ಎಷ್ಟೋ ಇರುತ್ತವೆ.

ರಾಮಾನುಜ—ನಾನು ಇಲ್ಲಿರುವುದಕ್ಕೆ ಆಗುವುದಿಲ್ಲ.

ನಂಜಯ್ಯ—ಹೌದು, ಹೌದು (ಸ್ವಲ್ಪ ಮುಂದೆ ಬಂದು) ದೊರೆಗಳಿಗೆ ಇನ್ನೊಂದು ಮಾತು ಹೇಳಿ ಪ್ರಧಾನಿಗಳೆ. ಬೆಟ್ಟದ ಒಡೆಯರು

ನನ್ನ ಮೇಲೆ ಬಹಳ ವಿಶ್ವಾಸವಾಗಿದಾರೆ; ನಾನು ಇಲ್ಲಿ ನಿಲ್ಲುವ ದಕ್ಕೆ ಅವರದೇ ಹೆಚ್ಚು ಬಲವಂತ ಎಂದು.

ರಾಮಾನುಜ—ಅಗತ್ಯವಾಗಿ ಆಗಲಿ. ನಾನಿನ್ನು ಹೊರಡುತೇನೆ.

(ಪ್ರಧಾನಿಯು ಹೊರಡುವನು)

ಸಂಜಯ್ಯ—ನೀವು ಈ ಸಮಯಕ್ಕೆ ಬಂದುದು ಬಹಳ ಒಳ್ಳೆಯದಾಯಿತು ವೀರರಾಜಯ್ಯ.

ವೀರ—ನಿಮ್ಮ ಕಾಗದ ತಲುಪಿತು, ಕೂಡಲೆ ಹೊರಟುಬಂದೆ

ಸಂಜಯ್ಯ—ಇಲ್ಲಿ ಒಂಟಿಗನಾಗಿ ಕೆಲಸ ಮಾಡುವುದಕ್ಕಿಂತ ನಿಮ್ಮ ಸಹಾಯವೂ ಇದ್ದರೆ ಮೇಲು ಎಂದು ತಿಳಿದು ತಮಗೆ ಬರೆದೆ. ಆದರೆ ಹಿಂದೆ ಕೈಬಿಟ್ಟಹಾಗೆ ಈಗ ಮಾತ್ರ ಮಾಡಲಾಗದು.

ವೀರ—ಛೆ, ಛೆ, ಹಾಗೆ ಮಾಡುವೆನೆ ಸಂಜಯ್ಯ! ಆಗ ನಾನು ಬಹಳ ಮೋಸ ಹೋದೆ. ಇಲ್ಲದಿದ್ದರೆ ನಮ್ಮ ರಾಜ್ಯವೂ ಹೋಗುತ್ತಿತ್ತೆ.

ಸಂಜಯ್ಯ—ಆಗ ಉದಾಶೀನರಾಗಿದ್ದು ಒಬ್ಬೊಬ್ಬರ ರಾಜ್ಯಗಳನ್ನೂ ಕಳೆದುಕೊಂಡುದಾಯಿತು. ಸ್ವತಂತ್ರವೆನ್ನುವ ರಾಜ್ಯವು ಈಗ ಒಂದೂ ಇಲ್ಲ. ಆ ಬೇಗೆಯು ನಿಮ್ಮ ಎದೆಯಲ್ಲಿ ಉರಿಯುತ್ತಿಲ್ಲವೆ.

ವೀರ—ಇಲ್ಲದೆ ಉಂಟೆ, ಸಮಯ ಸಿಗಲಿಲ್ಲ. ಸಿಕ್ಕಿದ್ದರೆ ಈ ಮಹಿಸೂರು ರಾಜ್ಯವನ್ನು ನುಚ್ಚುನೂರು ಮಾಡಿಬಿಡುತ್ತಿದ್ದೆ.

ಸಂಜಯ್ಯ—ಇಲ್ಲಿಯ ಪರಿಸ್ಥಿತಿಗಳನ್ನೆಲ್ಲಾ ಪತ್ರದಲ್ಲಿ ನಿಮಗೆ ತಿಳಿಸಿದೇನೆ. ನಮ್ಮ ರಾಜ್ಯಗಳನ್ನು ಹಿಂದಕ್ಕೆ ಪಡೆಯುವುದಕ್ಕೆ, ಮಹಿಸೂರಿನ ಮೇಲಿನ ನಮ್ಮ ಸೇಡನ್ನು ತೀರಿಸಿಕೊಳ್ಳುವುದಕ್ಕೆ ಇದೇ ಕಡೆಯ ಪ್ರಯತ್ನ. ಇದರಲ್ಲಿ ನಿಮ್ಮ ಸಂಪೂರ್ಣ ಶಕ್ತಿಯನ್ನೂ ಉಪಯೋಗಿಸಬೇಕು.

ವೀರ—ಬೇಕಾದರೆ ನನ್ನ ಜೀವವನ್ನೇ ಇದಕ್ಕೆ ಒಪ್ಪಿಸುತ್ತೇನೆ.

ನಂಜಯ್ಯ—ನಿಜವೋ.

ವೀರ—ಕುಲದೇವಿಯಾಣೆ.

ನಂಜಯ್ಯ—ಹಾಗಾದರೆ ಕೈಯಿಕ್ಕಿ. ಈ ಎರಡು ಕೈಗಳೂ ಒಂದುಗೂಡಿ ಮಹಿಸೂರನ್ನು ದಹಿಸಬೇಕು. ಮಹಿಸೂರು ಉರಿವ ಜ್ವಾಲೆಗಳಲ್ಲಿ ನಾವು ಔತಣವನಿಕ್ಕಬೇಕು.

ವೀರ—ಆದರೆ ಬೆಟ್ಟದ ಚಾಮರಾಜ! ಅವನು ಇದಕ್ಕೆಲ್ಲಾ ಒಪ್ಪುತಾನೆಯೆ? ಮಹಿಸೂರಿನ ನಾಶಕ್ಕೆ ಅವನು ಬೆಂಬಲವಾಗುತಾನೆಯೆ?

ನಂಜಯ್ಯ—ಇದೆಲ್ಲಾ ಅವನಿಗೇಕೆ ತಿಳಿಯಬೇಕು. ನಮ್ಮ ಮಾತಿಗೆ, ನಮ್ಮ ಪಲ್ಲವಿಗೆ ತಕ್ಕಂತೆ ಅವನು ತಾಳಹಾಕುವುದಕ್ಕೆ ಬಗ್ಗಲಿ.

ವೀರ—ಆಮೇಲೆ.

ನಂಜಯ್ಯ—ನಮ್ಮ ಬಲವೊಂದು ಹೆಚ್ಚಲಿ. ಅನಂತರ ಉಳಿದ ಮಾತು.

ವೀರ—ಒಂದು ವೇಳೆ ಅವನು ನಮ್ಮ ಕಡೆ ಸೇರಲಿಲ್ಲ. ಆಗೇನು ಮಾಡುವುದು.

ನಂಜಯ್ಯ—ಮೊದಲು ಅವನನ್ನು ತೀರಿಸಿ ಅನಂತರ ಮಹಿಸೂರನ್ನು ಕೈವಶಮಾಡಿಕೊಳ್ಳುವುದು.

ವೀರ—ಅದಕ್ಕೆ?

ನಂಜಯ್ಯ—ಆ ಕೆಲಸಕ್ಕೇ ನಿಮ್ಮನ್ನು ಕರೆಸಿದುದು. ಮಹಿಸೂರು ಮನೆತನದ ಬಂಧುಗಳಾದುದರಿಂದ ಇಲ್ಲಿ ನಿಮಗೆ ತಿಳಿದ ಜನರು ಬಹಳವಾಗಿರಬೇಕು.

ವೀರ—ತಕ್ಕಮಟ್ಟಿಗೆ ಇದಾರೆ.

ನಂಜಯ್ಯ—ಅವರಲ್ಲಿ ನಿಮ್ಮ ದಾಯಕ್ಕೆ ಬೀಳುವವರನ್ನು ಈಗಿನಿಂದಲೇ ನೀವು ಬುಟ್ಟಿಗೆ ಹಾಕಿಕೊಳ್ಳಬೇಕು. ಅಪಾರವಾದ ಆಸೆಯನ್ನು ತೋರಿಸಿ ಆದಷ್ಟು ಉಪಾಯದಿಂದ ನಿಮ್ಮ ಕೆಲಸಕ್ಕೆ ಅಣಿ ಮಾಡಿಟ್ಟುಕೊಳ್ಳಬೇಕು. ಸಮಯಬಂದ ಪಕ್ಷದಲ್ಲಿ ಬೆಟ್ಟದ ಚಾಮರಾಜನನ್ನು ಕೊಲ್ಲುವುದಕ್ಕೂ ಸಹ ಅವರು ಸಿದ್ಧರಾಗಿರಬೇಕು.

ವೀರ—ಅಷ್ಟಕ್ಕೆ ಬರಬಹುದೇನು.

ನಂಜಯ್ಯ—ಇಲ್ಲ, ಅಲ್ಲಿಯವರೆಗೂ ಹೋಗಲಾರದು. ಮೂರುಪಾಲು ಪಳಗಿದಾನೆ. ಆದರೂ ನೀವು ಮಾತ್ರ ಸಿದ್ಧಮಾಡಿಟ್ಟಿರಿ.

ವೀರ—ಅಗತ್ಯವಾಗಿ ಆಗಲಿ. ಸಂತೋಷದಿಂದ ನನ್ನ ಕೆಲಸವೆಂದು ಮಾಡುತ್ತೇನೆ.

ಮಾದ—(ಪ್ರವೇಶಿಸಿ) ಮಹಾಪ್ರಭು.

ನಂಜಯ್ಯ—ಏನದು ?

ಮಾದ—ಬೆಟ್ಟದ ದೊರೆಗಳು ಬರ್‍ತ್ಯಿದಾರೆ.

ನಂಜಯ್ಯ—ಮರ್ಯಾದೆಯಿಂದ ಒಳಗೆ ಕರೆದುಕೊಂಡು ಬಾ.

(ಮಾದ ಹೋಗುವನು.)

ವೀರ—ಇವರೇಕೆ ಬಂದರು ಈಗ.

ನಂಜಯ್ಯ—ಗೊತ್ತಿಲ್ಲ. ಸುಮ್ಮನೆ ಏನಾದರೂ ಮಾತಾಡುವುದಕ್ಕಿರಬಹುದು.

(ಬೆಟ್ಟದ ಚಾಮರಾಜಒಡೆಯರು ಪ್ರವೇಶಿಸುವರು)

ನಂಜಯ್ಯ—ಓ ತಾವೆ ! ಬೆಟ್ಟದ ಒಡೆಯರು. ದಯಮಾಡಬೇಕು.

(ಒಬ್ಬರಿಗೊಬ್ಬರು ನಮಸ್ಕರಿಸುವರು.)

ಬೆ. ಒಡೆಯರು—ಯಾವಾಗ ಬಂದಿರಿ ವೀರರಾಜಯ್ಯ.

ವೀರ—ಈಗತಾನೇ ಬಂದೆ ದೊರೆಗಳೆ.

ಬೆ. ಒಡೆಯರು—ಉತ್ಸವಕ್ಕೆ ಬರಬೇಕೆಂದು ಒರೆಸಿದ್ದೆವು. ಓಲೆಕಾರ ಬಂದಿದ್ದ ತಾನೆ?

ವೀರ—ಬಂದಿದ್ದ. ಅದರ ಮೇಲೆಯೇ ಈದಿನ ಹೊರಟು ಬಂದುದು.

ಬೆ. ಒಡೆಯರು—ಬಹಳ ಸಂತೋಷ.

ನಂಜಯ್ಯ—ಕುಳಿತುಕೊಳ್ಳಿ ದೊರೆಗಳೆ. ಇದೇನು! ಏಕಾಏಕಿ ಬರೋಣವಾಯಿತು. ಮುಂದಾಗಿ ಒಂದು ಮಾತು ಹೇಳಿಕಳುಹಿಸ ಬಾರದಾಗಿತ್ತೆ.

ಬೆ. ಒಡೆಯರು—ಮುಂದಾಗಿ ಹೇಳಿಕಳುಹಿಸಿದ್ದರೆ ಮನೆಯನ್ನು ಶೃಂಗ ರಿಸಿ ಎದುರುಗೊಳ್ಳುವುದಕ್ಕೆ ವಾಲಗ ತರುತ್ತಿದ್ದಿರಾ.

ನಂಜಯ್ಯ—ಮನೆ ನಿಮ್ಮದು, ವಾಲಗ ನಿಮ್ಮದು, ಏಕೆ ತರಬಾರದು.

ಬೆ. ಒಡೆಯರು—ಹೌದು. ತರುವವರೂ ನಮ್ಮವರೇ. ಅಲ್ಲವೆ ವೀರ ರಾಜಯ್ಯ.

ನಂಜಯ್ಯ—ಅಲ್ಲವೆಂದರಾದೀತೆ. ತಿನ್ನುವ ಅನ್ನ ನಿಮ್ಮದು, ಕುಡಿ ಯುವ ನೀರು ನಿಮ್ಮದು, ಇರುವ ರಾಜ್ಯ ನಿಮ್ಮದು, ನಾನು ಮಾತ್ರ ಬೇರೆಯಾದೇನೆ.

ವೀರ—ಹೌದು, ಹೌದು.

ಬೆ. ಒಡೆಯರು—ನಾವು ಹೇಳಿದುದು ಆ ಅರ್ಥದಲ್ಲಲ್ಲ; ನಾವು ನಾವು ಸ್ನೇಹಿತರು ಎಂಬ ಭಾವನೆಯಿಂದ.

ನಂಜಯ್ಯ—ನಾನು ಹಾಗೆ ತಿಳಿಯಲಾರೆ. ತಾವು ಎಷ್ಟಾದರೂ ದೊರೆ ಗಳು, ನಾವು ತಮ್ಮ ಕೆಳಗಿನವರು.

ವೀರ—ತಮ್ಮ ಆಶ್ರಿತವರ್ಗದಲ್ಲಿ ಒಬ್ಬರು.

ಚಿ. ಒಡೆಯರು—ನಾವು ದೊರೆಗಳೇ ಅಲ್ಲವಲ್ಲ.

ನಂಜಯ್ಯ—ಅದು ಯಾರೊಪ್ಪುವ ಮಾತು. ಹಿಂದೆ ದೊರೆತನ ಮಾಡಿಲ್ಲವೆ; ಈಗ ಮಾಡುವ ಶಕ್ತಿಯಿಲ್ಲವೆ; ದಿಗ್ದೇಶಗಳನ್ನು ಜಯಿಸಿ ಪ್ರಖ್ಯಾತರಾಗಿಲ್ಲವೆ?

ವೀರ—ಏನು ಮಾತು, ಏನು ಮಾತು.

ಚಿ. ಒಡೆಯರು—(ಸ್ವಲ್ಪ ಸುಮ್ಮನಿದ್ದು) ನೀವಿಲ್ಲಿಗೆ ಬಂದಾಗಿನಿಂದಲೂ ಹೀಗೇ ಹೇಳುತ್ತಿದೀರಿ ನಂಜಯ್ಯ.

ವೀರ—ಅವರೇ ಅಲ್ಲ ದೊರೆಗಳೆ, ಲೋಕವೇ ಆಡುತ್ತಿದೆ.

ನಂಜಯ್ಯ—ಹೌದು. ನಮ್ಮ ಶ್ರೀರಂಗರಾಯರೂ ಕೂಡ ಯಾವಾಗಲೂ ಹೀಗೇ ಹೇಳುತ್ತಿರುತಾರೆ. ನಾನು ಹೇಳುವ ಮಾತು ತಮಗೆ ಅಪಥ್ಯವೇನೋ.

ಚಿ. ಒಡೆಯರು—ಛೆ, ಛೆ, ಹೇಳಿ.

ನಂಜಯ್ಯ—ನಿಮ್ಮಲ್ಲಿನ ವಿಶ್ವಾಸದಿಂದ ಹೇಳುತ್ತಿದೇನೆ. ತಮ್ಮ ಔದಾರ್ಯ, ಸಾಹಸ ಎಲ್ಲರಿಗೂ ಬರಲಾರದು. ಇಷ್ಟು ಹೊತ್ತೂ ನಿಮ್ಮ ಮಾತೇ ಆಡುತಿದ್ದೆವು.

ಚಿ. ಒಡೆಯರು—ಅದೇನು.

ನಂಜಯ್ಯ—ರಾಜ್ಯಗಳ ಅಳಿವು ಉಳಿವುಗಳ ವಿಚಾರವಾಗಿ ಮಾತಾಡುತಿದ್ದೆವು. ಯಾವ ರಾಜ್ಯವೇ ಆಗಲಿ ಸಾಮಾನ್ಯವಾಗಿ ಯಾರೋ ಒಬ್ಬ ಮಹಾಪುರುಷನ ಅಂಶದಿಂದ ಉಳಿದಿರುತ್ತದೆ ಎಂದು ನಾನು ಹೇಳುತ್ತಿದ್ದೆ. ಅದಕ್ಕೆ ವೀರರಾಜಯ್ಯನವರು 'ಈಗ ಮಹಿಸೂರು ರಾಜ್ಯ ನೋಡಿ. ಚಿಕ್ಕದ ಒಡೆಯರೊಬ್ಬರು ಇಲ್ಲದಿದ್ದರೆ ಇದುವರೆಗೆ ಅದರ ಹೆಸರೇ ಇರುತ್ತಿರಲಿಲ್ಲ' ಎಂದರು. ಅಲ್ಲಿಂದ ನಿಮ್ಮ

ಪ್ರಕಾರ, ನೀವು ಮಹಿಸೂರಿನ ವಿಸ್ತಾರಕ್ಕೆ ಮಾಡಿರುವ ಸಾಹಸ ಗಳು ಇವೆಲ್ಲಾ ಮಾತಿನಲ್ಲಿ ಬಂದುವು. ನಿಷ್ಪಕ್ಷಪಾತವಾಗಿ ಹೇಳಬೇಕೆಂದರೆ, ದೊರೆಗಳೆ, ನಿಮಗೆ ದೊರೆತನ ತಪ್ಪಿಸಿದುದು ಬಹಳ ಅನ್ಯಾಯ.

ವೀರ—ಬಹಳ ಅನ್ಯಾಯ. ಅಖಂಡ ಪರಾಕ್ರಮ, ಸಾಮಂತ ನರಪತಿ ಗಳ ಮತ್ತು ಪ್ರಜೆಗಳ ಪ್ರೀತಿವಾತ್ಸಲ್ಯಗಳು, ಕಾರ್ಯದಕ್ಷತೆ, ಮತ್ತು ರಾಜ್ಯಕ್ಕೆ ಜ್ಯೇಷ್ಠಾಂಶದ ಹಕ್ಕು ಇವಿಷ್ಟು ಇದ್ದರೂ ಕೂಡ ತಮಗೆ ರಾಜ್ಯದ ಅಧಿಕಾರಬೇಡವೆ?

ಬೆ. ಒಡೆಯರು—(ನಿಟ್ಟುಸಿರು ಬಿಟ್ಟು) ಒಂದೊಂದು ಸಲ ನನಗೂ ಹಾಗೇ ಎನ್ನಿಸುತ್ತದೆ. ಆದರೆ ಹಿಂದೆಯೇ ಯಾರು ಮಾಡಿದರೇನು, ಅವನೂ ನನ್ನ ತಮ್ಮ ತಾನೇ ಎಂದುಕೊಂಡು ಸಮಾಧಾನ ಪಡುತೇವೆ.

ನಂಜಯ್ಯ—ಬರಿಯ ಸಮಾಧಾನಕ್ಕೇನು ಹೇಗೆಂದುಕೊಂಡರೆ ಹಾಗೆ ಸಮಾಧಾನವಾಗುತ್ತದೆ. ಅಣ್ಣನು ರಾಜ್ಯಭಾರಮಾಡುತ್ತಾ ತಮ್ಮನ ಯೋಗಕ್ಷೇಮ ನೋಡುವುದು ಹೇಗಿದೆ. ಅದು ಬಿಟ್ಟು ತಮ್ಮನು ದೊರೆಯಾಗಿದ್ದು ಅಣ್ಣನಿಗೆ ಅಪ್ಪಣೆ ಮಾಡುತಿರುವುದು ಹೇಗಿದೆ.

ಬೆ. ಒಡೆಯರು—ಹೇಗಿದೆ?

ನಂಜಯ್ಯ—ನಾನು ಹೇಳುವುದಿಲ್ಲ. ಇದೇ ಕಿವಿಗಳಿಂದ ನಾನು ಎಷ್ಟೋ ಬಾರಿ ಕೇಳಿದ್ದರೂ ನಾನು ಹೇಳಬಾರದು.

ವೀರ—ಜನರು ಸಾವಿರ ಮಾತಾಡುತ್ತಾರೆ, ಅದನ್ನೆಲ್ಲಾ ಹೇಳಿದ ರಾದೀತೆ.

ಬಿ. ಒಡೆಯರು—ಹೇಳಿ, ಅದರಲ್ಲೇನು ಮುಚ್ಚುಮರೆ.

ನಂಜಯ್ಯ—ಇನ್ನೇನೂ ಇಲ್ಲ. (ಕಿವಿಯಲ್ಲಿ ಹೇಳಿ) ಅಷ್ಟೇ.

(ಬಿಟ್ಟದ ಒಡೆಯರು ತಲೆ ಬಗ್ಗಿಸಿಕೊಳ್ಳುವರು. ಮಾದನು ಮೆಲ್ಲನೆ ಕಾಣಿಸಿಕೊಳ್ಳುವನು.)

ನಂಜಯ್ಯ—(ಮುಂದೆ ಹೋಗಿ) ಏನದು?

ಮಾದ— ಚಂದ್ರಮ್ಮನೋರು ಬಂದೈದಾರೆ ಒಂದ್ಗೆ, ತಮ್ಮನ್ನ ಕಾಣ ಬೇಕಂತೆ.

ನಂಜಯ್ಯ—ಹೊರಗಡೆ ನಿಲ್ಲಿಸಿಕೊಂಡಿರು, ಈಗ ಬಿಡಬೇಡ.

ಮಾದ—ಅಪ್ಪಣೆ.

ಬಿ. ಒಡೆಯರು—ಜನಗಳು ನನ್ನ ವಿಷಯದಲ್ಲಿ ನಿಜವಾಗಿಯೂ ಹಾಗೆಂದುಕೊಳ್ಳುವರೆ?

ನಂಜಯ್ಯ—ಇಲ್ಲದಿದ್ದರೆ ನನಗೆ ಹೇಗೆ ತಿಳಿಯಬೇಕು.

ಬಿ. ಒಡೆಯರು—ಅವರು ಹಾಗೆ ಹೇಳಬೇಕಾದ್ದೇ ನಿಜ. ನಾವು ಸ್ವಲ್ಪದರಲ್ಲಿ ಮೋಸಹೋದೆವು. ಆಗಲೇ ಮುಸ್ಕರ ಮಾಡಿದ್ದರೆ ಚೆನ್ನಾಗಿತ್ತು.

ನಂಜಯ್ಯ—ಈಗ ತಾನೆ ಮಿಂಚಿಹೋದುದೇನು. ತಾವು ಸ್ವಲ್ಪ ಬಿಗಿಯಾಗಿದ್ದರೆ ಸಾಕು, ಅದು ತಾನೇ ಸರಿಹೋಗುತ್ತದೆ.

ವೀರ—ರಾಜ್ಯಕ್ಕಾಗಿ ತಾವು ಅಷ್ಟು ಯೋಚನೆ ಮಾಡಬೇಕೆ? ಸ್ವಲ್ಪ ಅತ್ತಕಡೆ ಗಮನ ಕೊಟ್ಟರೆ ಸಾಕು.

ಬಿ. ಒಡೆಯರು—ಏಕೋ, ಹೋಗಲಿ ಬಿಡಿ. ಎಂದೋ ಬಿಟ್ಟುಕೊಟ್ಟುದಕ್ಕೆ ಈಗೇಕೆ ಅವಾಂತರ.

ನಂಜಯ್ಯ—ನೀವೀಗ ಹಾಗೆನ್ನಬಹುದು. ನಿಮ್ಮ ಮಕ್ಕಳು, ಮೊಮ್ಮಕ್ಕಳು ಹಾಗೆನ್ನುವರೆ? ಎಲ್ಲರೂ ತಮ್ಮ ಮೇಲೆ ದೂರು ಹಾಕಿ ಬೆರಳು ಮುರಿಯುವುದಿಲ್ಲವೆ?

ಬಿ. ಒಡೆಯರು—ಹೌದು, ಅದೂ ನಿಜ. ಇದುವರೆಗೆ ನನಗೆ ಆಕಡೆ ಯೋಚನೆ ಬೀಳಲಿಲ್ಲ. ಮಕ್ಕಳಿಗಾಗಿ ನಾವು ರಾಜ್ಯವಾಳಬೇಕು ........ರಾಜ್ಯವಾಳಬೇಕು........ ಹೌದು, ರಾಜ್ಯವಾಳಲೇಬೇಕು. ಆದರೆ! (ತಲೆಯೆತ್ತಿ ನೋಡುವರು.)

ವೀರ—ನಿಮಗೆ ಬೆಂಬಲವಾಗಿ ನಾವಿದ್ದೇವೆ.

ನಂಜಯ್ಯ—ನಮ್ಮ ಜೀವವೇ ನಿಮ್ಮದು.

ಬಿ. ಒಡೆಯರು—ಹೌದು, ನೀವು ಸಹಾಯ ಮಾಡುತ್ತೀರಿ. ಆದರೆ ಇನ್ನೊಂದು ಮಾತು. ರಾಜನು ನಮಗೆ ತಮ್ಮ, ಮಕ್ಕಳಿಗಿಂತಲೂ ಹೆಚ್ಚು ವಿಶ್ವಾಸದಿಂದಿದ್ದಾನೆ. ಅವನಿಗೆ ದ್ರೋಹ ಮಾಡುವುದೆ?

ನಂಜಯ್ಯ—ಇದು ದ್ರೋಹವಲ್ಲ ದೊರೆಗಳೆ. ರಾಜಧರ್ಮ. ಅವರು ಗದ್ದಿಗೆ ಏರುವಾಗ ತಾವು ದೊರೆಗಳಾಗಿರಲಿಲ್ಲವೆ. ಮತ್ತೆ ಅವರು ಆಸ್ಥಾನವನ್ನು ಆಕ್ರಮಿಸುವ ಅವಶ್ಯಕತೆಯೇನಿತ್ತು.

ಬಿ. ಒಡೆಯರು—ಹೌದು. ಆಗ ಮಾಡಿದುದು ಅನ್ಯಾಯ. ಅದು ಅನ್ಯಾಯವೆಂದು ಸಂಪೂರ್ಣವಾಗಿ ನಮಗೆ ತಿಳಿದಿದೆ. ಆದರೂ ಮನಸ್ಸೇಕೋ ಹಿಂದೆಗೆಯುತ್ತದೆ. ಈಗ ಆ ಮಾತು ಬೇಡಿ ನಂಜಯ್ಯ. ಇನ್ನಾವಾಗಲಾದರೂ ಮನಸ್ಸು ಸ್ಥಿಮಿತವಾಗಿರುವಾಗ ಆಲೋಚನೆ ಮಾಡೋಣ.

ನಂಜಯ್ಯ—ತಮ್ಮ ಚಿತ್ತ.

ಬಿ. ಒಡೆಯರು—ನಿಮಗೆ ಒಂದು ಮಾತು ಹೇಳಬೇಕಾಗಿತ್ತು. ನಾಳೆ ಶುಕ್ರವಾರ ಚಾಮುಂಡಿಬೆಟ್ಟಕ್ಕೆ ಹೋಗೋಣವೆ.

ನಂಜಯ್ಯ—ಆಗಲಿ, ಹೋಗೋಣ.

ಬಿ. ಒಡೆಯರು—ನೀವು ನೋಡಬೇಕಾದ ಸ್ಥಳ ಅದು. ನೀವೂ ಬನ್ನಿ ವೀರರಾಜಯ್ಯ, ಎಲ್ಲರೂ ಜೊತೆಯಲ್ಲಿ ಹೋಗೋಣ.

ವೀರ—ಆಗಲಿ ಬರುತ್ತೇನೆ.

ಚಿ. ಒಡೆಯರು—ನೀವಿಲ್ಲಿಗೆ ಬಂದವರು ರಾಜನನ್ನು ಕಂಡಿದ್ದಿರಾ.

ವೀರ—ಇನ್ನೂ ಇಲ್ಲ. ಮೊದಲು ಇಲ್ಲಿಗೇ ಬಂದೆ.

ಚಿ. ಒಡೆಯರು—ಬನ್ನಿ ನಮ್ಮ ಅರಮನೆಯ ಕಡೆ ಹೋಗೋಣ.

(ನಂಜಯ್ಯ ಸಂಜ್ಞೆ ಮಾಡುತ್ತಾನೆ. ವೀರರಾಜಯ್ಯ ಅದನ್ನು ಕಂಡು ಚಿಟ್ಟದ ಚಾಮರಾಜ ಒಡೆಯರನ್ನು ಹಿಂಬಾಲಿಸುತ್ತಾನೆ.)

ಚಿ. ಒಡೆಯರು—ಸಂಜೆಯಿಂದ ಅತ್ತಕಡೆ ಬನ್ನಿ ನಂಜಯ್ಯ.

ನಂಜಯ್ಯ—ಆಗಲಿ.

(ಚಿಟ್ಟದ ಒಡೆಯರೂ ವೀರರಾಜಯ್ಯನೂ ಹೋದಮೇಲೆ) ಬಲೆಗೆ ಬಂದು ಬಿದ್ದ ಹಾಗಾಯಿತು. ಇನ್ನೊಂದರ ವ್ಯವಸ್ಥೆಯನ್ನು ಆದಷ್ಟು ಬೇಗ ಮಾಡಬೇಕು. ಮಾದಾ!

ಮಾದ—ಬುದ್ಧೀ.

ನಂಜಯ್ಯ—ಚಂದ್ರವದನಾ ಏಕೆ ಬಂದಿದಾಳೆ ಕೇಳಿದೆಯಾ.

ಮಾದ—ನನ್ನ ತಾವ ಏಳಲಿಲ್ಲ ಬುದ್ಧಿ.

ನಂಜಯ್ಯ—ಇವತ್ತಲ್ಲವೆ ಉತ್ತರ ಹೇಳುತ್ತೇನೆ ಎಂದಿದ್ದುದು ಅವಳು.

ಮಾದ—ಹೌದು ಬುದ್ದಿ.

ನಂಜಯ್ಯ—ಒಳ್ಳೇದು, ಅವಳನ್ನು ಒಳಗೆ ಕಳಿಸಿಕೊಡು. ಹಾಗೇ ಹೋಗಿ ಪದ್ಮಾವತಿಯನ್ನು ಕರೆದುಕೊಂಡು ಬಂದು ಹೊರಗಡೆ ಕೂಡಿಸಿಕೊಂಡಿರು.

ಮಾದ—ಅಪ್ಪಣೆ.

(ಮಾದನು ಹೋಗಿ ಚಂದ್ರವದನೆಯನ್ನು ಕಳುಹಿಸುವನು.)

ನಂಜಯ್ಯ—ಬಾ ಚಂದ್ರಾ, ನಿನಗಾಗಿಯೇ ಕಾದಿದ್ದೆ.

ಚಂದ್ರವದನಾ—ಆದರಿಂದಲೇ ಹೊರಗಡೆ ನಿಲ್ಲಿಸಿದ್ದಿರೇನೋ.

ನಂಜಯ್ಯ—ಸ್ನೇಹಿತರು ಅಕಸ್ಮಾತ್ ಬಂದುಬಿಟ್ಟರು. ಎರಡು ಮಾತಾಡದೆ ಕಳುಹಿಸುವುದು ಹೇಗೆ. ಅವರು ಬಂದಿದ್ದುದಾದರೂ ಒಹು ಮುಖ್ಯ ವಿಚಾರ.

ಚಂದ್ರ—ಏನೋ ಬಹಳ ಬಹಳ ಆಪ್ತವಾಗಿದ್ದೀರಲ್ಲ ಚಿಕ್ಕ ಇಲಿಗಳು.

ನಂಜಯ್ಯ—ನಮ್ಮ ಅವರ ಹೃದಯ ಒಂದೇ ಚಂದ್ರಾ. ಆದರಿಂದ ಇಷ್ಟು ಬೇಗ ಕಲೆತುಬಿಟ್ಟೆವು. ಅವರೂ ಅಷ್ಟೇ, ಕಪಟವಿಲ್ಲದವರು. ಬೆಳ್ಳಗಿರುವುದೆಲ್ಲಾ ಹಾಲೆನ್ನುವಾತ.

ಚಂದ್ರ—ಅಂದರೆ ನಿಮ್ಮ ಹೊರಗೆ ತೋರುವುದೇ ಒಂದು........

ನಂಜಯ್ಯ—ಛೆ, ಛೆ, ಒಳ್ಳೇ ಚತುರೆಯೇ ನೀನು. ಒಂದು ಮಾತಿಗೆ ನಾಲ್ಕು ಅರ್ಥ ಮಾಡುತೀಯೆ!

ಚಂದ್ರ—ನಿಮಗಿಂತಲೂ ಚತುರಳೇನಲ್ಲವಲ್ಲ. ನನ್ನ ಚಾತುರ್ಯವೇನಿದ್ದರೂ ನಾಲ್ಕು ಹಣದ ದೆಶೆಯಿಂದ ತಮ್ಮಂತಹ ಶ್ರೀಮಂತರನ್ನು ಒಲಿಸಿಕೊಳ್ಳುವುದರಲ್ಲಿ. ನಿಮ್ಮ ಹಾಗೆ ಚಕ್ರಾಧಿಪತ್ಯಗಳನ್ನು ಕಟ್ಟುವುದಕ್ಕೆ ಮುರಿಯುವುದಕ್ಕೆ ನನಗೆ ಬರದು.

ನಂಜಯ್ಯ—ಅದನ್ನು ನಾನು ನಂಬುವುದಿಲ್ಲ. ಈಗ ನೋಡು, ಶ್ರೀರಂಗರಾಯರ ರಾಜ್ಯವು ನಿಂತಿರುವುದು ನಿನ್ನ ಕೈಯಲ್ಲಿ. ನೀನು ಕೈ ಹಿಡಿದು ಉದ್ಧಾರ ಮಾಡಿದರೆ ಅದು ನಿಲ್ಲುತ್ತದೆ. ಇಲ್ಲದಿದ್ದರೆ ಹೀಗೆಯೇ ಮುಳುಗಿಹೋಗುತ್ತದೆ.

ಚಂದ್ರ—ನನಗೆ ತಿಳಿಯಲಿಲ್ಲ.

ನಂಜಯ್ಯ—ಪಾಪ! ಹೇಗೆ ತಿಳಿದೀತು. ಇದು ಎಷ್ಟನೆಯಸಲ ನಿನಗೆ ಹೇಳುತಿರುವುದು, ಇನ್ನೂ ತಿಳಿಯಲಿಲ್ಲವೊ?

ಚಂದ್ರ—ಓ ಅದೋ! ಈಗ ತಿಳಿಯಿತು.

ನಂಜಯ್ಯ—ಒಪ್ಪಿಗೆ ತಾನೆ?

ಚಂದ್ರ—ಒಳ್ಳೆಯ ಮಾತು ದೊರೆಗಳೆ. ನಿಮ್ಮ ರಾಜ್ಯವನ್ನು ನಿಲ್ಲಿಸು ವುದಕ್ಕಾಗಿ ಮಹಿಸೂರು ರಾಜ್ಯವನ್ನು ಹಾಳುಮಾಡಬೇಕೆ? ಧರ್ಮಪ್ರಭುಗಳಾದ ರಾಜಒಡೆಯರನ್ನು ನಾನು ಕೊಲ್ಲಬೇಕೆ? ಅವರ ಉಪ್ಪು ತಿನ್ನುತಿದ್ದು ಅವರಿಂದ ಸನ್ಮಾನಗಳನ್ನು ಪಡೆಯು ತಿದ್ದು ಅವರಿಗೆ ಎರಡು ಬಗೆಯುವುದೆ, ಹೇಳಿ.

ನಂಜಯ್ಯ—ಅವರ ಉಪ್ಪು ಉಚಿತವಾಗಿ ಬರುತ್ತಿಲ್ಲ ಚಂದ್ರಾ. ನಿನ್ನಂತಹ ಕಲಾಕೋವಿದಳು ಇಲ್ಲಿರುವುದು ಮಹಿಸೂರಿನವರ ಪುಣ್ಯ. ನಿನ್ನ ಗಾಯನಕ್ಕೆ ನರ್ತನಕ್ಕೆ ಅವರು ಕೊಡುವ ಒಂದಿಷ್ಟು ಗಂಜಿಯೇನೆ ಬೆಲೆ?

ಚಂದ್ರ—ಬಾಯಿಮಾತಿಗೇನು ದೊರೆಗಳೆ. ಇಲ್ಲಿ ಇಷ್ಟಾದರೂ ಸಿಗು ತ್ತಿದೆ. ಹೀಗೇ ಒಬ್ಬರಿಗೊಬ್ಬರು ಕಚ್ಚಾಡಿ ಕಡಿದಾಡಿ ಅವರ ರಾಜ್ಯ ವನ್ನವರು ಇವರ ರಾಜ್ಯವನ್ನವರು ಉರುಳಿಸುತ್ತಿರಿ. ನಮ್ಮಂತಹ 'ಕಲಾ ಕೋವಿದರು' ಕಾಡು ಸೇರಲು ಸರಿಹೋಗುತ್ತದೆ.

ನಂಜಯ್ಯ—ಕಾಡು ಸೇರಬಹುದು. ಕೋಗಿಲೆಗಳೊಡನೆ ಹಾಡು ವುದಕ್ಕೆ.

ಚಂದ್ರ—ಬಣ್ಣದ ಮಾತಿಗೇನು, ತಮಗೆ ಹೇಳಿಕೊಡಬೇಕೆ.

ನಂಜಯ್ಯ—ಅದೆಲ್ಲಾ ಇರಲಿ. ರಾಜಒಡೆಯರ ವಿಚಾರ ಏನುಮಾಡಿದೆ. ನವರಾತ್ರಿಯೂ ಬಂತು. ಒಂದಲ್ಲ ಒಂದುದಿನ ನಿನ್ನ ನರ್ತನ ವಾಗಲೇಬೇಕು. ಆ ವೇಳೆಯಲ್ಲಿ........

ಚಂದ್ರ—ಕ್ಷಮಿಸಿ ದೊರೆಗಳೆ. ಅವರನ್ನು ಕೊಲ್ಲುವುದಕ್ಕೆ ನನ್ನ ಕೈ ಬರದು. ನನ್ನ ತಂದೆ, ಇನ್ನೂ ನೂರು ವರ್ಷ ಸುಖವಾಗಿ ಬದುಕಿರಲಿ.

ನಂಜಯ್ಯ—ಏಕೆ, ನಿನಗೆ ಅಂಜಿಕೆಯೇನು?

ಚಂದ್ರ—ನೀವು ಹಾಗೆಯೇ ತಿಳಿದುಕೊಳ್ಳಿ.

ನಂಜಯ್ಯ—ಮತ್ತೊಮ್ಮೆ ಆಲೋಚಿಸು ಚಂದ್ರಾ. ಕಾಲಿಗೆ ಎಡವಿ ಬಂದ ನಿಧಿಯನ್ನು ಬಿಡಬಾರದು. ಇದೊಂದು ಕೆಲಸವನ್ನು ಮಾಡಿದರೆ ಆಜೀವವೂ ಸ್ವರ್ಗಸುಖವನ್ನನುಭವಿಸುವಿ. ತುತ್ತು ಕೂಳಿಗಾಗಿ ಕಂಡವರು ಹೇಳಿ ಹೇಳಿದಂತೆ ಹಾಡುವ, ಕುಣಿಯುವ ಹೀನ ಕೆಲಸವನ್ನು ಕಾಲಿನಿಂದೊದೆದು ಬಿಡುತ್ತಿ. ನನ್ನ ರಾಣಿಯಾಗಿ ಮಹಿಸೂರ ಸಿಂಹಾಸನದ ಮೇಲೆ, ಅಖಂಡ ರಾಷ್ಟ್ರದ ಮೇಲೆ, ಆಧಿಪತ್ಯ ಮಾಡುತ್ತಿ.

ಚಂದ್ರ—ಏನು! ಮಹಾರಾಣಿ! ಆಧಿಪತ್ಯ!

ನಂಜಯ್ಯ—ಹೌದು, ಯಾವ ಸಿಂಹಾಸನದ ಬಳಿ ಸರಗೊಡ್ಡಿ ಭಿಕ್ಷೆಗೆ ನಿಲ್ಲುತ್ತಿರುವೆಯೋ ಆ ಸಿಂಹಾಸನದ ಮೇಲೆ ಕುಳಿತು ರಾಜವೈಭವದಿಂದಿರುತ್ತೀ.

ಚಂದ್ರ—(ಸ್ವಲ್ಪ ಯೋಚಿಸಿ) ಆ ವೈಭವ ನನಗೆ ಬೇಡ ದೊರೆಗಳೆ, ಇರುವುದಿಷ್ಟೇ ಸಾಕು.

ನಂಜಯ್ಯ—ಇದು ಬರಿಯ ನನ್ನ ಮಾತೆಂದು ನಿನಗೆ ಅನುಮಾನವೇನೋ. ಇಲ್ಲಿ ನೋಡು, ಶ್ರೀರಂಗರಾಯರು ಇದಕ್ಕೊಪ್ಪಿ ತಮ್ಮ ಗುರುತಿಗಾಗಿ ಮುದ್ರೆಯುಂಗುರವನ್ನು ಕೊಟ್ಟಿದಾರೆ.

ಚಂದ್ರ—ಯಾರು ಕೊಟ್ಟಿದ್ದರೇನು, ನನಗೆ ಸಮಾಧಾನವಿಲ್ಲ

ನಂಜಯ್ಯ—(ಯೋಚಿಸುತ್ತಿರುವಂತೆ ನಟಿಸಿ) ನಿನ್ನದು ದುರಾದೃಷ್ಟ. ಹೋಗಲಿ, ಮಾದಾ!

ಮಾದ—ಬುದ್ಧಿ.

ನಂಜಯ್ಯ—ಇವರನ್ನು ಮನೆಗೆ ಬಿಟ್ಟುಬಾ ಹೋಗು. ನನ್ನನ್ನು ನೋಡಬೇಕೆಂದು ಹೊರಗಡೆ ಇನ್ನು ಯಾರಾದರೂ ಕಾದಿದಾರೆ ಯೇನು ?

ಮಾದ—ಪದ್ಮಾವತಮ್ಮನೋರು ಬಂದು ಕಾದ್ಯೆದಾರೆ ಬುದ್ಧಿ.

ನಂಜಯ್ಯ—ಒಳ್ಳೇದು. ಇನ್ನು ನಿಮಗೆ ಹೊತ್ತಾಯಿತೇನೋ. ಮಾದ ಮನೆಗೆ ಬಿಟ್ಟು ಬರುತಾನೆ.

(ಮಾದನು ಹೊರಕ್ಕೆ ಹೋಗುವನು.)

ಚಂದ್ರ—ಪದ್ಮಾವತಿ ಇಲ್ಲಿಗೇಕೆ ಬಂದಿದಾಳೆ.

ನಂಜಯ್ಯ—ಏನೋ ಅವಳನ್ನೇ ಕೇಳಬೇಕು.

ಚಂದ್ರ—ನಿಮಗೆ ತಿಳಿಯದು !

ನಂಜಯ್ಯ—ಅವಳು ಬಂದಿರುವ ಕೆಲಸ ನಾನು ಹೇಗೆ ಹೇಳಲಿ.

ಚಂದ್ರ—ನನಗೆ ಗೊತ್ತು. ಅವಳ ಕೈಯಿಂದ ದೊರೆಗಳನ್ನು ಕೊಲ್ಲಿಸು ವುದಕ್ಕೆ ಕರೆಸಿದೀರಿ.

(ನಂಜಯ್ಯ ವಕ್ರವಾಗಿ ನಗುವನು.)

ಚಂದ್ರ—ಈ ತಂತ್ರವೆಲ್ಲಾ ನಾನು ದೊರೆಗಳಿಗೆ ಹೇಳಿಬಿಡುತ್ತೇನೆ.

ನಂಜಯ್ಯ—ಹೇಳು, ನನಗೇನೂ ನಷ್ಟವಿಲ್ಲ.

ಚಂದ್ರ—ನೀವು ಪದ್ಮಾವತಿಯನ್ನು ನೋಡಕೂಡದು.

ನಂಜಯ್ಯ—ಉಹ್ಹೊ, ಹಾಗೇನು ! ನೀನು ಬರಿಯ ಅಂಜಿಕೆಯವಳೆಂದು ತಿಳಿದಿದ್ದೆ ; ಹೊಟ್ಟೆಕಿಚ್ಚಿನವಳೂ ಹೌದು.

ಚಂದ್ರ—ಹೌದು, ನನಗೆ ಹೊಟ್ಟೆಕಿಚ್ಚು.

ನಂಜಯ್ಯ—ಅದು ನಿನ್ನ ಸ್ವಭಾವವಿರಬಹುದು, ನಾನೇನು ಮಾಡಲಿ. ನಾನಂತೂ ಮಹಿಸೂರನ್ನು ಗೆಲ್ಲುವುದು ಖಂಡಿತ. ಬೆಟ್ಟದ ಒಡೆ ಯರು ನನ್ನ ಕಡೆ ಇದ್ದಾರೆ, ಪಾಳೆಯಗಾರರೆಲ್ಲ ನಾನು ಹೇಳಿದಂತೆ

ಕೇಳುತಾರೆ. ಒಂದಲ್ಲ ಒಂದು ದಿನ ಒಬ್ಬರಲ್ಲ ಇನ್ನೊಬ್ಬರಿಂದ ನನ್ನ ಕಾರ್ಯವೇನೋ ಕೈಗೂಡುತ್ತದೆ. ನೀನೂ ಸಹಾಯ ಮಾಡಿದ್ದರೆ ಚೆನ್ನಾಗಿತ್ತು. ಆ ಭೋಗ ಭಾಗ್ಯಗಳು ನಿನಗೆ ಬೇಡವಾದುವು.

ಚಂದ್ರ—(ಸ್ವಲ್ಪ ಹೊತ್ತು ಸುಮ್ಮನಿದ್ದು) ಹಾಗಾದರೆ, ವೇಶ್ಯೆಯನ್ನು ನೀವು ಮದುವೆಯಾಗುತ್ತೀರಾ.

ನಂಜಯ್ಯ—ಮದುವೆಯಾಗುವವರೆಗೆ ವೇಶ್ಯೆ, ಅನಂತರ ಅವಳೇ ಅಚ್ಚ ಗರತಿ.

ಚಂದ್ರ—ಜನಗಳಾದರೂ ಆಕ್ಷೇಪಿಸುವುದಿಲ್ಲವೆ?

ನಂಜಯ್ಯ—ಸಿಂಹಾಸನವೇರಿದಮೇಲೆ ನಮ್ಮನ್ನು ಆಕ್ಷೇಪಿಸುವುದಕ್ಕೆ ಯಾರಿಗೆ ಧೈರ್ಯವಿರುತ್ತದೆ?

ಚಂದ್ರ—ನಿಮ್ಮ ಮಾತೆಲ್ಲ ತಮಾಷೆಯ ಹಾಗೆ ತೋರುವುದು.

ನಂಜಯ್ಯ—ನೀನು ಹುಚ್ಚಿ, ನಿನಗೆ ತಮಾಷೆಯೇನು ನಿಜವೇನು ತಿಳಿಯುವುದೆ?

ಚಂದ್ರ—ಖಂಡಿತವಾಗಿಯೂ ನನ್ನನ್ನು ಮದುವೆಯಾಗುತ್ತೀರಾ?

ನಂಜಯ್ಯ—ಏಕೆ ಅನುಮಾನ.

ಚಂದ್ರ—ನನ್ನ ಕೊರಲಾಣೆಗೂ ಹೇಳಿ.

ನಂಜಯ್ಯ—ನಿನ್ನ ಕೊರಲಾಣೆಗೂ ಮದುವೆಯಾಗುತ್ತೇನೆ.

ಚಂದ್ರ—ನೀವು ಬಹಳ ಒಳ್ಳೆಯವರು ದೊರೆಗಳೇ!

ನಂಜಯ್ಯ—(ನಕ್ಕು) ಮಾದಾ!

ಮಾದ—ಬುದ್ಧಿ.

ನಂಜಯ್ಯ—ಪದ್ಮಾವತಿಯನ್ನು ನೋಡುವುದಕ್ಕೆ ಈಗ ವಿರಾಮವಿಲ್ಲ ಎಂದು ಹೇಳು.

ಮಾದ—ಅಪ್ಪಣೆ.

ಚಂದ್ರ—ಹಾಗೆಯೇ ಇನ್ನು ಮೇಲೆ ಅವಳಿಲ್ಲಿಗೆ ಬರಬೇಕಾದ ಕೆಲಸವಿಲ್ಲ ಎಂತಲೂ ಹೇಳು.

ಮಾದ—ಅಪ್ಪಣೆ. ಇನ್ನೊಂದು ಇಸಾರ. ಜ್ಯೋತಿಲನಾಯಕರು ಬಂದವ್ರೆ.

ಚಂದ್ರ—(ಗಾಬರಿಯಿಂದ) ಇನ್ನು ನಾನು ಹೊರಡುತೇನೆ ದೊರೆಗಳೆ.

ನಂಜಯ್ಯ—ಆಗಲಿ. ಇತ್ತಕಡೆ ಬಾಗಿಲಿಂದಲೇ ನಡಿ.

ಮಾದ—ಅವರ್ನ ಒಳೀಕೆ ಬಿಡಲೆ?

ನಂಜಯ್ಯ—ಬೇಡ, ಮಲಗಿದೇವೆಂದು ಹೇಳು.

(ಚಂದ್ರವದನೆಯು ಎದುರು ಬಾಗಿಲಿನಿಂದ ಹೋಗುತ್ತಿರುವಳು. ಇತ್ತ ಕಡೆಯಿಂದ ಜ್ಯೋತಿಲನು ಅವಳನ್ನೇ ನೋಡುತ್ತ ಪ್ರವೇಶಿಸುವನು. ನಂಜಯ್ಯನು ಕಡೆಯಲ್ಲಿ ಹೇಳಿದಮಾತು ಅವನ ಕಿವಿಗೂ ಬೀಳುವುದು.)

ಜ್ಯೋತಿಲ—ಕ್ಷಮಿಸಬೇಕು ನಂಜಯ್ಯನವರೆ, ಕಾಯುವಷ್ಟು ಹೊತ್ತಿರಲಿಲ್ಲ. ದೊರೆಗಳು ತಮ್ಮನ್ನು ಈಗಿಂದೀಗಲೇ ಕರೆದುಕೊಂಡು ಬರಹೇಳಿದರು.

ನಂಜಯ್ಯ—ಏಕೆ.

ಜ್ಯೋತಿಲ—ನಾನು ಹೇಗೆ ಹೇಳಲಿ.

ನಂಜಯ್ಯ—ನನಗೆ ಬಹಳ ತಲೆನೋಯುತ್ತಿದೆ ಜ್ಯೋತಿಲ. ಇನ್ನು ಸ್ವಲ್ಪ ಹೊತ್ತಿನಮೇಲೆ ಬರುತ್ತೇನೆಂದು ಹೇಳು.

ಜ್ಯೋತಿಲ—ತಡಮಾಡಿದರೆ ದೊರೆಗಳಿಗೆ ಅಸಮಾಧಾನವಾಗಬಹುದು.

ನಂಜಯ್ಯ—ಇಲ್ಲ ನೀನು ನಡೆ, ಹಿಂದೆಯೇ ಬರುತ್ತೇವೆ. (ಜ್ಯೋತಿಲನು ಹೋಗುವನು.) ದೊರೆಯು ಕರೆಯುವನೆಂಬ ಬರಡುಕಾರಣ— ಒಳಗೆ ಬಂದು ನೋಡುವುದಕ್ಕೆ ; ಗುಪ್ತ ಪಿಶಾಚಿಗಳು.

## ಸ್ಥಾನ ೩—ಮಹಿಸೂರು ಓಲಗಶಾಲೆ

(ಪ್ರಧಾನಿ, ಜ್ಯೋತಿಲ)

ಜ್ಯೋತಿಲ—ಏನೋ ಪ್ರಮಾದ ಸಂಭವಿಸುವ ಹಾಗಿದೆ ಪ್ರಧಾನಿಗಳೆ. ಬಹಳ ಅಪಶಕುನಗಳಾಗುತ್ತಿವೆ.

ಪ್ರಧಾನಿ—ಪುರೋಹಿತರೂ ಹೀಗೆಯೇ ಹೇಳಿದರು. ಅದಕ್ಕಾಗಿ ಶಾಂತಿ ಹೋಮಗಳನ್ನು ಮಾಡುವಹಾಗೆ ಹೇಳಿದೇನೆ.

ಜ್ಯೋತಿಲ—ಚಾಮುಂಡೇಶ್ವರಿಯ ಅನುಗ್ರಹದಿಂದ ಎಲ್ಲವೂ ಸುರಕ್ಷಿತ ವಾಗಿ ನಡೆದರೆ ಸಾಕಾದೀತು.

ಪ್ರಧಾನಿ—ಮಹಾಸ್ವಾಮಿಯವರು ಎಲ್ಲಿದಾರೆ.

ಜ್ಯೋತಿಲ—ಮಜ್ಜನ ಶಾಲೆಯಿಂದ ಈಗತಾನೆ ಬಂದರು. ಓಲಗವನ್ನು ಕೊಡುವುದಕ್ಕೆ ಸಜ್ಜಾಗುತಿದಾರೆ.

ಕಾಟ—(ಪ್ರವೇಶಿಸಿ) ಜೀಯಾ?

ಜ್ಯೋತಿಲ—ಏನು ಕಾಟ.

ಕಾಟ—ಚಾಮುಂಡಿಗೆ ಹೋಗಿದ್ದೆ, ದೊಡ್ಡ ದೊರೆಗಳು ಅಲ್ಲಿರಲಿಲ್ಲ.

ಜ್ಯೋತಿಲ—ಸಂಜಯ್ಯ.

ಕಾಟ—ಅವರೂ ಇರಲಿಲ್ಲ.

ಪ್ರಧಾನಿ—ಏನು ನಾಯಕರೆ ಅದು?

ಜ್ಯೋತಿಲ—ಸಂಜಯ್ಯ ಈಗ ಮೂರು ದಿನಗಳಿಂದ ಬೆಟ್ಟದ ಒಡೆಯ ರನ್ನು ಎಡಬಿಡದೆ ಇರುತ್ತಿದ್ದ. ಬೆಳಿಗ್ಗೆ ಇಬ್ಬರೂ ಚಾಮುಂಡಿ ಬೆಟ್ಟದ ಕಡೆಗೆ ಕುದುರೆಗಳನ್ನೇರಿ ಹೋದರಂತೆ. ನನಗೇಕೋ ಅನುಮಾನವಾಯಿತು. ಹಿಂದೆಯೇ ಇವನನ್ನು ಕಳಿಸಿದೆ; ಅಲ್ಲಿರ ಲಿಲ್ಲವೆಂದು ಬಂದಿದಾನೆ.

ಪ್ರಧಾನಿ—ಹಾಗಾದರೆ !

ಜ್ಯೋತಿಲ—(ಯೋಚಿಸಿ) ಬೆಟ್ಟದ ದೊರೆಗಳಿಗೇನೂ ಅಪಾಯವಾಗಿರಲಾರದು. ಅವರು ಬೇರೆ ದಾರಿಯಿಂದ ಶ್ರೀರಂಗಪಟ್ಟಣಕ್ಕೆ ಹೋಗಿರಬೇಕು. ಕಾಟ! ಪಟ್ಟಣಕ್ಕೆ ಯಾರನ್ನಾದರೂ ಈಗಲೇ ಓಡಗಳಿಸಿ ಸುದ್ದಿ ತರಿಸು. ಅಲ್ಲಿ ನಮ್ಮ ರಂಗನನ್ನು ಕೇಳಿದರೆ ಎಲ್ಲಾ ತಿಳಿಯುತ್ತದೆ, ಹುಂ. (ಕಾಟನು ಹೋಗುತ್ತಾನೆ.) ಯಾರು ಬಾಗಿಲಲ್ಲಿ.

ಸೇವಕ—ಜೀಯಾ !

ಜ್ಯೋತಿಲ—ಬಾ ಇಲ್ಲಿ. ಓಲಗಕ್ಕೆ ಜನರನ್ನು ಬಿಡಬೇಕಾದರೆ ಸ್ವಲ್ಪ ಎಚ್ಚರಿಕೆಯಿಂದಿರಬೇಕು. ಆಯುಧಗಳಿರಕೂಡದೆಂದು ಮೊದಲೇ ತಿಳಿಸಿದೆ. ಆದರೂ ಯಾರಾದರೂ ಆಗದವರು ಬಚ್ಚಿಟ್ಟುಕೊಂಡು ತರಬಹುದು. ಅನುಮಾನ ಬರದಂತೆ ನೀವು ಕಂಡುಕೊಳ್ಳಬೇಕು.

ಸೇವಕ—ಅಪ್ಪಣೆ. (ಹೋಗುವನು)

ಪ್ರಧಾನಿ—ನಿಮ್ಮದು ಬಹಳ ದೂರಾಲೋಚನೆಯುಳ್ಳವೆ.

ಜ್ಯೋತಿಲ—ಯಾವಕಾಲಕ್ಕೂ ಏನೋ ಪ್ರಧಾನಿಗಳೆ. ನಮ್ಮ ಎಚ್ಚರದಲ್ಲಿ ನಾವಿರಬೇಕು.

ಪ್ರಧಾನಿ—ಅಣ್ಣನವರೆಲ್ಲಿ ಎಂದು ಮಹಾಸ್ವಾಮಿಯವರು ಕೇಳಿದರೆ.

ಜ್ಯೋತಿಲ—ನಾನು ಉತ್ತರ ಹೇಳುತ್ತೇನೆ.

(ಪಾಳೆಯಗಾರರು ಒಬ್ಬೊಬ್ಬರಾಗಿ ಬರುವರು. ಪ್ರಧಾನಿಯು ಅವರನ್ನು ಆದರಿಸಿ ಕುಳ್ಳಿರಿಸುವನು. ಜ್ಯೋತಿಲನಾಯಕನು ಬೇರೆಬೇರೆ ಸ್ಥಳಗಳಿಂದ ಅವರೊಬ್ಬೊಬ್ಬರನ್ನೂ ಪರೀಕ್ಷಿಸುತ್ತಾ ತನ್ನಲ್ಲಿಯೇ ಸಮಾಧಾನ ಹೊಂದುತ್ತಿರುವನು.)

ತಲಕಾಡು—(ಪ್ರವೇಶಿಸುತ್ತಾ) ಈ ನವರಾತ್ರಿ ಉತ್ಸವ ಇನ್ನೂ ಎಷ್ಟು ದಿವಸ ನಡೆಯುವುದು.

ನರಸಿಂಗ—ಇನ್ನೇನು ಎಲ್ಲಾ ಮುಗಿಯಿತು. ಈಗಿನ ನಾಟ್ಯ ಒಂದು ಮೆರವಣಿಗೆ ಒಂದು ಮುಗಿದರೆ ಹೆಚ್ಚು ಕಡಿಮೆ ಎಲ್ಲಾ ಆದಹಾಗೇ ಸರಿ.

ಅರಕೆರೆ—ಯಾರದು ನಾಟ್ಯ.

ನರಸಿಂಗ—ಚಂದ್ರವದನೆ ಎಂತ ಕೇಳಿಲ್ಲವೆ ನೀವು.

ಅರಕೆರೆ—ಯಾರು! ತೆಳ್ಳಗೆ ಬೆಳ್ಳಗೆ ಇದಾಳಲ್ಲ ಅವಳುತಾನೆ.

ತಲಕಾಡು—ಮನ್ನೆ ಆಯುಧಗಳ ಮೆರವಣಿಗೆಯಲ್ಲಿ ತಳಕು ಬಳಕು ಮಾಡಿಕೊಂಡು ಮುಂದೆ ಕಳಶ ಹಿಡಿದು ಹೋಗುತಿರಲಿಲ್ಲವೆ?

ನರಸಿಂಗ—ಹೌದು ಅವಳೇ. ಚೆನ್ನಾಗಿ ಸಂಗೀತವೂ ಹಾಡುತಾಳೆ. ತಿಂಗಳಿಗೆ ಇನ್ನೂರು ವರಹ ಸಂಬಳ ಅವಳೊಬ್ಬಳಿಗೇ.

ಅರಕೆರೆ—ಅಬ್ಬಾ!

ಪ್ರಧಾನಿ—ಎಲ್ಲರೂ ದಯಮಾಡಿ ಕುಳಿತುಕೊಳ್ಳಿ. ದೊರೆಗಳು ಬರುವ ವೇಳೆಯಾಯಿತು.

(ತೆರೆಯಲ್ಲಿ ಪರಾಕು ಶಬ್ದವಾಗುವುದು.)

* "ಶ್ರೀಮತ್ಪಶ್ಚಿಮ ರಂಗನಾಥ ಪಾದಾರವಿಂದ ಬಂಭರಾಯಿತ ಚಿತ್ತ! ಮತ್ತರಿಪುಷಂಡ ಖಂಡನೋದ್ದಂಡದೋರ್ದಂಡ! ಅರ್ಥಿ ಜನೇಪ್ಸಿತದಾನ ಶೌಂಡ! ಅಂಗನಾಜನ ಕುಸುಮಕೋದಂಡ! ಬಾಹುದಂಡಧೃತ ವಿವಿಧಾಯುಧಕಾಂಡ! ಬಿರುದಂತೆಂಬರಗಂಡ! ಮಿತ್ರಕುಲ ಕಮಲಮಾರ್ತಾಂಡ! ರಾಜಕಂದರ್ಪ! ರಾಜಾಧಿ ರಾಜ ಮಹಾರಾಜ!"

ಪರಾಕ್! ಬಹುಪರಾಕ್!

---

* ವಂಶರತ್ನಾಕರದಿಂದ ಉದ್ಧೃತವಾದುದು.

(ರಾಜಒಡೆಯರು ಮತ್ತು ಇತರರು ಪ್ರವೇಶಿಸುವರು. ಎಲ್ಲರೂ ಎದ್ದು ನಮಸ್ಕಾರ ಮಾಡುವರು)

ರಾಜಒಡೆಯರು—(ನಿಂತಿದ್ದ ಹಾಗೇ ಸುತ್ತಲೂ ನೋಡಿ) ಕಸ್ತೂರಿ ಬಾಡಿಯವರು ಈ ದಿನವೂ ಬರಲಿಲ್ಲವೆ?

ಪ್ರಧಾನಿ—ಇಲ್ಲ ಪ್ರಭೂ, ಮೈಯಲ್ಲಿ ಸ್ವಸ್ಥವಿಲ್ಲವೆಂದು ಹೇಳಿ ಕಳುಹಿಸಿದಾರೆ.

ರಾಜ—ಇಂದು ಬರುತ್ತೇವೆ, ನಾಳೆ ಬರುತ್ತೇವೆ ಎಂದು ಇದುವರೆಗೆ ವೃಥಾ ಕಾಲ ಕಳೆದರು. ಅವರೂ ಈ ಉತ್ಸವದಲ್ಲಿ ಸೇರಿದ್ದರೆ ನಮಗೆ ಬಹು ಸಂತೋಷವಾಗುತಿತ್ತು.

ಪ್ರಧಾನಿ—ಹೌದು ಮಹಾಪ್ರಭು.

ರಾಜ—ಸಂಜಯ್ಯನವರು ವೀರರಾಜಯ್ಯನವರು ಎಲ್ಲಿ ಕಾಣುವುದಿಲ್ಲ.

ಜ್ಯೋತಿಲ—ಬಿಡದಿಗೆ ಹೇಳಿ ಕಳುಹಿಸಿದ್ದೆ. ಬೆಳಿಗ್ಗೆ ಚಾಮುಂಡಿ ಬೆಟ್ಟಕ್ಕೆ ಹೋದವರು ಇದುವರೆಗೂ ಬರಲಿಲ್ಲವಂತೆ. ಜೊತೆಯಲ್ಲಿ ಅಣ್ಣಾಜಿ ನವರೂ ಹೋಗಿದಾರಂತೆ.

ರಾಜ—ಬೆಟ್ಟಕ್ಕೆ ಯಾರನ್ನಾದರೂ ಕಳುಹಿಸಬೇಕಾಗಿತ್ತು.

ಜ್ಯೋತಿಲ—ಕಳುಹಿಸಿದೇನೆ ಮಹಾಪ್ರಭು.

ರಾಜ—ಎಲ್ಲರೂ ಕುಳಿತುಕೊಳ್ಳಿ (ತಾವೂ ಕುಳಿತು) ನೀವುಗಳೆಲ್ಲರೂ ಬಂದಿರುವುದರಿಂದ ನಮ್ಮ ಮನಸ್ಸಿಗೆ ಬಹಳ ಸಂತೋಷವಾಗಿದೆ.

ನರಸಿಂಗ—ತಮ್ಮ ಸಂತೋಷವೇ ನಮ್ಮಗಳ ಸಂತೋಷ.

ರಾಜ—ವರ್ಷಕ್ಕೆ ಒಂದು ವೇಳೆಯಾದರೂ ಇಂತಹ ಉತ್ಸವದಲ್ಲಿ ತಾವುಗಳೆಲ್ಲಾ ಭಾಗಿಗಳಾಗಬೇಕೆಂಬುದೇ ನಮ್ಮ ಉದ್ದೇಶ. ಅದಕ್ಕಾಗಿಯೇ ಈ ನವರಾತ್ರಿಯ ಉತ್ಸವವನ್ನು ಏರ್ಪಡಿಸಿರುವುದು.

ನರಸಿಂಗ—ಮಹಾಸ್ವಾಮಿಯವರ ಸ್ವಭಾವವು ಬಹಳ ಉದಾರ ವಾದುದು. ಸನ್ನಿಧಾನದಲ್ಲಿ ಒಂದು ಅರಿಕೆಮಾಡಿಕೊಂಡಿದ್ದೆ.

ರಾಜ—ಯಾವುದು. ಹೇಮಾವತೀ ನದೀತೀರದಲ್ಲಿರುವ ಹಳ್ಳಿಗಳ ವಿಚಾರ ತಾನೆ?

ನರಸಿಂಗ—ಹೌದು ಮಹಾಪ್ರಭು. ಈ ಮಹೋತ್ಸವದ ನೆನಪಾಗಿ ಅವುಗಳ ಹಕ್ಕನ್ನು ನನಗೆ ಬಿಟ್ಟು ಕೊಡಬೇಕು.

ರಾಜ—ಆಗಲಿ. ಪ್ರಧಾನಿಗಳೆ, ನರಸಿಂಗನಾಯಕರಿಗೆ ಒಂದು ನಿರೂಪ ವನ್ನು ಬರೆಸಿಕೊಡಿ.

ಪ್ರಧಾನಿ—ಅಪ್ಪಣೆ.

(ರಾಜಒಡೆಯರು ಜ್ಯೋತಿಲನ ಕಡೆ ನೋಡುತ್ತಾರೆ. ಅವನು ಹೊರಗಡೆ ಸಂಜ್ಞೆ ಮಾಡುತ್ತಾನೆ. ಚಂದ್ರವದನೆ ಮತ್ತು ವೇಷಾಂತರದಲ್ಲಿ ಮಾದ ಪ್ರವೇಶಿ ಸುವರು. ಮಾದನು ತಂಬೂರಿಯನ್ನು ಹೊತ್ತಿರುವನು.)

ಮಾದ—(ಮೆಲ್ಲನೆ) ದೊರೆಗಳು ಪಳಿದ್ದು ಗ್ಯಾಪ್ಕಾ ಐತ್ರಾ ತಾಯಿ.

ಚಂದ್ರ—ಇದೆ.

ಮಾದ—........ತಂದಿವ್ರಾ.

ಚಂದ್ರ—ಇದೆ ಸುಮ್ಕಿರಿೂ.

ಮಾದ—ನಾನೂ ಇಲ್ಲೇ ಇರುತಿವ್ನಿ. ಬಯ ಪೇಳ್ಬ್ಯಾಡ, ಎಂಗೋ—ಊ.

(ಚಂದ್ರವದನೆಯು ನಮಸ್ಕರಿಸಿ ಸಂಗೀತಕ್ಕೆ ಕುಳಿತುಕೊಳ್ಳುವಳು. ಹಾಡು ವಾಗ ಒಂದೆರಡು ಸಲ ಗಂಟಲು ಕಟ್ಟುವುದು. ರಾಜಒಡೆಯರು ಜ್ಯೋತಿಲನ ಕಡೆ ನೋಡುವರು. ಜ್ಯೋತಿಲನು ಮುಂದೆ ಬಂದು ಮೆಲ್ಲನೆ 'ಏಕೆ ಚಂದ್ರ ವದನಾ, ಮೈಯಲ್ಲಿ ಸ್ವಸ್ಥವಿಲ್ಲವೆ' ಎನ್ನುವನು. ಚಂದ್ರವದನೆಯು 'ಇಲ್ಲ ಸ್ವಸ್ಥವಾಗಿಯೇ ಇದೇನೆ' ಎಂದು ಹೇಳಿ ಎದ್ದು ನರ್ತನಕ್ಕಾರಂಭಿಸುವಳು.

ಜ್ಯೋತಿಲನು ಅವಳ ಕಡೆಗೇ ನೋಡುತ್ತಿರುವನು. ಚಂದ್ರವದನೆಯು ಸಮಯ ಕಾದು ರಾಜಒಡೆಯರ ಸಮೀಪಕ್ಕೆ ಬಂದು ಕಠಾರಿಯನ್ನು ತೆಗೆದು ಇರಿಯ ಹೋಗುವಳು. ಅದು ರಾಜಒಡೆಯರಿಗೆ ಸೋಕುವಷ್ಟರಲ್ಲಿ ಅವರ ಹಿಂದೆಯೇ ನಿಂತಿದ್ದ ಜ್ಯೋತಿಲನು ಅವಳ ಕೈಯನ್ನು ಬಲವಾಗಿ ಹಿಡಿದುಕೊಳ್ಳುವನು. ಗಾಬರಿಯಿಂದ ಎಲ್ಲರೂ ಏಳುವರು. ಚಂದ್ರವದನೆಯು ನಿರಾಶೆಯಿಂದ ಕಣ್ಣು ಬಿಡುತ್ತಾ ಜ್ಯೋತಿಲನ ಬಿರುಗಣ್ಣನ್ನು ಕ್ರೂರವಾಗಿ ದಿಟ್ಟಿಸುತ್ತಿರುವಳು.)

ಜ್ಯೋತಿಲ—ಪಿಶಾಚಿ! ಕೆಡಹು ಕೆಳಕ್ಕೆ ಅದನ್ನು.

ಚಂದ್ರ—ಕೈಬಿಡು ಜ್ಯೋತಿಲ, ಮಾನವಿಲ್ಲದ ನಾಯಿ.

ಪ್ರಧಾನಿ—ಮುಚ್ಚು ಬಾಯಿ. ಸನ್ನಿಧಾನದಲ್ಲಿ ಎಷ್ಟು ಕೂಗುತ್ತಿ.

ಜ್ಯೋತಿಲ—ಹುಂ. ಕೆಡಹು ಕೆಳಕ್ಕೆ. (ಕಠಾರಿಯು ಕೆಳಗೆ ಬೀಳುವುದು.)

ರಾಜ—(ಎರಡು ಹೆಜ್ಜೆ ಮುಂದೆ ಬಂದು) ಚಂದ್ರವದನೆ! ನೀನು ಬಹಳ ಸಾಹಸಿಗಳು.

(ಚಂದ್ರವದನೆಯು ಸುಮ್ಮನಿರುವಳು.)

ರಾಜ—ನಮ್ಮಿಂದ ಯಾವ ತಪ್ಪಿತಕ್ಕಾಗಿ ನೀನು ಈ ಸಾಹಸಕ್ಕೆ ಕೈಹಾಕಿದೆ.

(ಚಂದ್ರವದನೆಯು ಸುಮ್ಮನಿರುವಳು.)

ರಾಜ—ಅದನ್ನು ಹೇಳಲಾರೆ-ಹೋಗಲಿ. ನಮ್ಮ ಜೀವಕ್ಕೆ ಎಷ್ಟು ಬೆಲೆಯನ್ನು ಕಟ್ಟಿದ್ದೆ. ಬೆಲೆ ಕೊಡುತ್ತೇನೆಂದು ಹೇಳಿದ್ದ ಹೇಡಿ ಯಾರು.

ಜ್ಯೋತಿಲ—(ಕೆಳಗಿದ್ದ ಕಠಾರಿಯನ್ನು ತೆಗೆದುಕೊಂಡು ನೋಡುತಿದ್ದು) ಈ ಕಠಾರಿಯನ್ನು ಪರಾಂಬರಿಸಬೇಕು ಪ್ರಭು. ಇದರ ಮೇಲೆ 'ಶ್ರೀರಂಗ' ಎಂದು ಬರೆದಿದೆ.

ಪ್ರಧಾನಿ—ಇದು ಶ್ರೀರಂಗರಾಯರ ಕಪಟವೇ ಇರಬೇಕು ಪ್ರಭು.

ಸೇವಕ—(ಪ್ರವೇಶಿಸಿ) ಮಹಾಸ್ವಾಮಿಯವರಿಗೆ ಜಯವಾಗಲಿ. ಶ್ರೀರಂಗಪಟ್ಟಣದ ಕಡೆಯಿಂದ ವರ್ತಮಾನ ಬಂದಿದೆ. ಜೆಟ್ಟದ ದೊರೆಗಳೂ ನಂಜಯ್ಯನವರೂ ಶ್ರೀರಂಗಪಟ್ಟಣಕ್ಕೆ ದಯಮಾಡಿಸಿದರಂತೆ.

ರಾಜ—ಯಾವಾಗಿನ ಸುದ್ದಿ ಇದು.

ಸೇವಕ—ಈಗ ತಾನೆ ಆಣೆಕಾರ ಬಂದಿದಾನೆ ಪ್ರಭು.

ರಾಜ—ಒಳ್ಳೆಯದು. ಇದನ್ನು ಅನಂತರ ವಿಚಾರಿಸೋಣ. (ಚಂದ್ರವದನೆ ಕಡೆಗೆ) ಈ ಕಠಾರಿ ನಿನ್ನ ಬಳಿಗೆ ಹೇಗೆ ಬಂತು.

ಚಂದ್ರ—ನನ್ನ ಕಾರ್ಯವು ಕೈಗೂಡಿದ್ದರೆ ಹೇಳುತಿದ್ದೆ.

ರಾಜ—ನೀನು ಹೇಳದಿದ್ದರೂ ಅದರ ಮೇಲೆಯೇ ಕಾಣುತ್ತಿದೆ. ನಂಜಯ್ಯ ಶ್ರೀರಂಗರಾಯರು ಕಲೆತು ಮಾಡಿರುವ ತಂತ್ರವಿದು. ನಿಜವನ್ನು ಹೇಳು. ನಿನ್ನ ಅಪರಾಧವನ್ನು ಕ್ಷಮಿಸುತ್ತೇವೆ.

ಚಂದ್ರ—ಕ್ಷಮಿಸಬೇಕಾದುದಿಲ್ಲ. ಶಿಕ್ಷೆಗೆ ಸಿದ್ಧವಾಗಿದೇನೆ.

ರಾಜ—ರಾಜದ್ರೋಹಕ್ಕೆ ಶಿಕ್ಷೆಯಾವುದು ತಿಳಿಯುವುದೆ ?

ಚಂದ್ರ—ತಿಳಿದಿದೆ-ಮರಣ.

ರಾಜ—ನೀನು ಹೆಂಗಸು. ನಿನಗೆ ಮರಣದಂಡನೆಯನ್ನು ವಿಧಿಸುವುದಿಲ್ಲ. ಇನ್ನು ಮೂರು ದಿನಗಳ ಅವಧಿಯನ್ನು ಕೊಟ್ಟಿದೇವೆ. ಅದರೊಳಗೆ ನಿನ್ನ ಎಲ್ಲ ಆಸ್ತಿಯನ್ನೂ ಬಡಬಗ್ಗರಿಗೆ ದಾನಮಾಡಿ ನಮ್ಮ ಸೀಮೆಯಿಂದಾಚೆಗೆ ಹೊರಟು ಹೋಗು. ಪ್ರಧಾನಿಗಳೆ ! ದಾನದ ಸುವ್ಯವಸ್ಥೆಯನ್ನು ನೋಡಿಕೊಳ್ಳಿ. (ಮಾದನ ಕಡೆ ನೋಡಿ) ಇವನು ಯಾರು ?

ಜ್ಯೋತಿಲ—ಇವನು ಇವಳ ತಂಬೂರಿಯನ್ನು ಹೊತ್ತು ತಂದವನು ಪ್ರಭು. ಓಡಿಹೋಗುತಿದ್ದ, ಹಿಡಿದು ನಿಲ್ಲಿಸಿದಾರೆ.

ರಾಜ—ಏತಕ್ಕೆ ಓಡಿಹೋಗುತಿದ್ದೆ.

ಮಾದ—(ಕಾಲಮೇಲೆ ಬಿದ್ದು) ಪಾತ್ಕಾವ ಐದೀಸಿ ಬುದ್ದಿ. ನಾನು ಒಡವಾಯಿ.

ಜ್ಯೋತಿಲ—ಇವನು ಸಂಜಯ್ಯನ ಆಪ್ತಸೇವಕ ಪ್ರಭು.

ರಾಜ—ಹಾಗೋ, ಸರಿ! ಇವನಿಗೆ ಮುಂಡನ ಮರ್ಯಾದೆಮಾಡಿ ಮೆರವಣಿಗೆಯಿಂದ ಅವನ ಧಣಿಯ ಒಳಿಗೆ ಕಳುಹಿಸಿ (ಸಭಿಕರಿಗೆ) ಮಿತ್ರರೆ! ನಿಮ್ಮೆಲ್ಲರಿಗೂ ಬಹಳ ಬೇಸರಪಡಿಸಿದ ಹಾಗಾಯಿತು. ಇಷ್ಟು ಅಭಾಸವಾಗುವುದೆಂದು ನಾವು ತಿಳಿದಿರಲಿಲ್ಲ. ನೀವೆಲ್ಲರೂ ಕಂಡಹಾಗೆ ಶ್ರೀರಂಗರಾಯರು ಎಷ್ಟು ಹೀನವಾದ ಕೃತ್ಯಗಳನ್ನು ನಡೆಸುತ್ತಿದಾರೆ. ಸಂಧಿಯ ನೆಪದಲ್ಲಿ ಸಂಜಯ್ಯನನ್ನು ಇಲ್ಲಿಗೆ ಕಳುಹಿಸಿ ಎಂತಹ ಕೆಟ್ಟ ಯೋಚನೆಯನ್ನು ಮಾಡಿದ್ದರು. ಶ್ರೀ ಚಾಮುಂಡೇಶ್ವರಿಯ ಅನುಗ್ರಹದಿಂದ ಅದು ಪಾರಾಯಿತು. ಈ ದಿನ ತಮ್ಮಗಳಿಗೂ ಬಹಳ ಆಯಾಸವಾಗಿದೆ. ಸ್ವಲ್ಪ ವಿಶ್ರಾಂತಿ ಪಡೆಯಿರಿ.

ನರಸಿಂಗ—ತಮ್ಮ ಗಂಡಾಂತರವು ಕಳೆದುದಕ್ಕಾಗಿ ನನ್ನ ರಾಜ್ಯದಲ್ಲಿನ ದೇವಸ್ಥಾನಗಳಲ್ಲೆಲ್ಲಾ ದೀಪವನ್ನು ಹೊತ್ತಿಸುತ್ತೇನೆ.

ರಾಜ—ಬಹಳ ಸಂತೋಷ. (ದೊರೆಗಳೂ ಸಭಿಕರೂ ಒಬ್ಬೊಬ್ಬರಾಗಿ ಕೈ ಮುಗಿದು ಹೋಗುವರು. ಉಳಿದವರು ರಾಜಒಡೆಯರು, ಪ್ರಧಾನಿ, ದಳವಾಯಿ ಮತ್ತು ಜ್ಯೋತಿಲ) ದಳವಾಯಿಗಳೆ! ಅಣ್ಣನವರನ್ನು ಶತ್ರುಗಳು ಮರುಳು ಮಾಡಿ ಅತ್ತಕಡೆ ಸೇರಿಸಿಕೊಂಡಿದಾರೆ. ಇನ್ನುಮೇಲೆ ಯುದ್ಧವು ಹೆಚ್ಚಬಹುದು. ಈ ಪಾಳೆಯಗಾರರನ್ನೂ ನಂಬುವ ಹಾಗಿಲ್ಲ. ಇವರಲ್ಲಿ ಎಷ್ಟು ಜನರು ಒಡೆದು ಹೋಗುತ್ತಾರೋ ಏನೋ. ಆದರಿಂದ ನಮ್ಮ ಸೈನ್ಯಗಳೆಲ್ಲವನ್ನೂ ಕೂಡಿಸಿಟ್ಟಿರಿ.

ಪ್ರಧಾನಿಗಳೆ! ಸರ್ಪದ ಬಾಯಲ್ಲಿ ಅಣ್ಣಾನವರು ಸಿಕ್ಕಿಕೊಂಡಿದಾರೆ.

ಪ್ರಧಾನಿ—ಹೌದು ಮಹಾಪ್ರಭು.

ರಾಜ—ಹೊರಗಿನ ಸೂರುಜನ ಶತ್ರುಗಳಿಗೆ ಸಹ ನಾವು ಯೋಚಿಸಬೇಕಾಗಿಲ್ಲ. ಯುದ್ಧದಲ್ಲಿ ಗೆಲ್ಲುವುದು ಸೋಲುವುದು ದೈವೇಚ್ಛೆ. ಆದರೆ ಅಣ್ಣಾನವರ ಜೀವಕ್ಕೆ ಶತ್ರುಗಳಿಂದ ಏನಾದರೂ ಅಪಾಯವಾದೀತೋ ಎಂಬ ಭಯವಿದೆ.

ಪ್ರಧಾನಿ—ಹೌದು, ಶತ್ರುಗಳ ಪ್ರಯತ್ನವು ಇಲ್ಲಿ ವಿಫಲವಾದುದನ್ನು ಕೇಳಿ ಕೋಪವಿನ್ನೂ ಕೆರಳಿರಬೇಕು.

ರಾಜ—ನಮಗೂ ಅದೇ ಯೋಚನೆ. ಆದರೆ ಈಗ ಯಾವುದನ್ನೂ ಹೇಳುವುದಕ್ಕೂ ಮನಸ್ಸು ಸರಿಯಾಗಿಲ್ಲ. ಇನ್ನೊಂದು ಜಾವಕ್ಕೆ ಬನ್ನಿ, ಮುಂದಿನ ಯೋಚನೆಯನ್ನು ಮಾಡೋಣ.

ಪ್ರಧಾನಿ—ಅಪ್ಪಣೆ.

ರಾಜ—ಬಾ ಜ್ಯೋತಿಲ. (ಕೈ ಹಿಡಿದು ಕರೆದುಕೊಂಡು ಹೋಗುವರು.)

## ಸ್ಥಾನ ೪—ಮಹಿಸೂರು ಅರಮನೆ

(ರಾಜಒಡೆಯರು, ಪ್ರಧಾನಿ, ದಳವಾಯಿ, ವೀರರಾಜಯ್ಯ, ಮತ್ತು ಇತರರು)

ದಳವಾಯಿ— ಮಹಾಪ್ರಭು, ಒಂದು ಸೋಜಿಗದ ಸುದ್ದಿಯನ್ನು ಕೇಳಿದೆ. ಜ್ಯೋತಿಲನಾಯಕರ ಮೇಲೆ ಮಹಾಸ್ವಾಮಿಯವರಿಗೆ ಸಂದೇಹವುಂಟಾಗಿದೆಯೆಂದು ಜನರಾಡಿಕೊಳ್ಳುತ್ತಾರೆ.

ರಾಜ—ಹೌದು. ನಮ್ಮನ್ನು ಕೊಲ್ಲಬೇಕೆಂದಿದ್ದ ಒಳಸಂಚಿಗೆ ಅವನೂ ಸೇರಿಕೊಂಡಿದಾನೆ.

ದಳವಾಯಿ—ಕ್ಷಮಿಸಿ ಮಹಾಪ್ರಭು, ಈ ಮಾತನ್ನು ತಾವಾದರೂ ನಂಬಬಹುದೆ.

ರಾಜ—ದಳವಾಯಿಗಳೆ, ನಮಗೆ ಸಂಪೂರ್ಣವಾಗಿ ನಂಬಿಕೆ ತಟ್ಟಿರುವುದ ರಿಂದಲೇ ಹೀಗೆ ಮಾಡಿದುದು. ಸಾಕಿದ ನಾಯಿ ಕಾಲು ಕಚ್ಚದೆ ಬಿಡುವುದಿಲ್ಲ, ಅಲ್ಲವೆ ವೀರರಾಜಯ್ಯ.

ವೀರ—ಹೌದು ಮಹಾಸ್ವಾಮಿ. ನನಗೂ ಸ್ವಲ್ಪ ಅನುಮಾನವೇ ಇತ್ತು. ಆದರೆ ತಮ್ಮ ಆಪ್ತ ಭೃತ್ಯ........

ರಾಜ—ಸುಮ್ಮನಿರಿ ಸಾಕು. ಆಪ್ತದಲ್ಲಿಯೇ ಕೆಲಸ ಮಾಡಿ ಅಣ್ಣನವ ರನ್ನು ಶ್ರೀರಂಗಪಟ್ಟಣಕ್ಕೆ ಕಳಿಸಿ ಇಲ್ಲಿ ನಮ್ಮ ಪ್ರಾಣಕ್ಕೇ ಸಂಚ ಕಾರ ತಂದಿದ್ದ. ಏನೋ ದೇವರ ದಯದಿಂದ ಅದು ಪಾರಾ ಯಿತು. ಪ್ರಧಾನಿಗಳೆ, ಅವನನ್ನು ಬರಮಾಡಿ. ಏನು ಹೇಳುವನೋ ಕೇಳೋಣ.

(ಜ್ಯೋತಿಲನ ಕೈಗಳನ್ನು ಕಟ್ಟಿ ಇಬ್ಬರು ಸೈನಿಕರು ಕರೆತರುವರು.)

ವಿಚಾರಿಸಿ.

ಪ್ರಧಾನಿ—ನಾಯಕರೆ, ನೀವು ದೊಡ್ಡ ದೊರೆಗಳನ್ನು ಕೊನೆಯಸಲ ನೋಡಿದುದು ಯಾವಾಗ?

ಜ್ಯೋತಿಲ—ಅವರು ಶ್ರೀರಂಗಪಟ್ಟಣಕ್ಕೆ ಹೊರಡುವುದಕ್ಕೆ ಮುಂಚೆ.

ಪ್ರಧಾನಿ—ಈಚೆಗೆ ದೊಡ್ಡ ದೊರೆಗಳ ಹತ್ತಿರ ನೀವು ಹೆಚ್ಚಾಗಿ ಹೋಗಿ ಬರುತ್ತಿದ್ದಿರಂತೆ, ನಿಜವೆ?

ಜ್ಯೋತಿಲ—ಏನಾದರೂ ಕೆಲಸದ ಮೇಲೆ ಹೋಗುತ್ತಿದ್ದೆ, ಅಷ್ಟೇ.

ಪ್ರಧಾನಿ—ಸಂಜಯ್ಯನವರ ಬಿಡದಿಗೆ ನೀವು ಆಗಾಗ್ಗೆ ಹೋಗುತ್ತಿ ದ್ದುದು ನಿಜವೊ?

ಜ್ಯೋತಿಲ—ಅಲ್ಲಿಗೂ ಸಹ ಏನಾದರೂ ಕೆಲಸ ಬಿದ್ದಾಗಲೇ ಹೋಗುತ್ತಿದ್ದುದು.

ಪ್ರಧಾನಿ—ದೊಡ್ಡ ದೊರೆಗಳ ಮನಸ್ಸನ್ನು ಸಂಜಯ್ಯನವರು ಕೆಡಿಸುತ್ತಿದಾರೆಂಬ ವಿಚಾರವು ನಿಮಗೆ ಯಾವಾಗ ತಿಳಿಯಿತು?

ಜ್ಯೋತಿಲ—ಆ ವಿಚಾರವು ನನಗೆ ಇದುವರೆಗೂ ತಿಳಿಯದು.

ರಾಜ—ತಿಳಿದಿದ್ದರೆತಾನೆ ಹೇಳುವುದು ಹೇಗೆ?

ಪ್ರಧಾನಿ—ಮಹಾಸ್ವಾಮಿಯವರನ್ನು ಕೊಲ್ಲಬೇಕೆಂದು ಒಳಸಂಚು ಎಷ್ಟು ದಿನದಿಂದ ನಡೆಯಿತು.

ಜ್ಯೋತಿಲ—ನನಗೆ ತಿಳಿಯದು.

ಪ್ರಧಾನಿ—ಈಗ ಕೆಲವು ದಿನಗಳ ಕೆಳಗೆ ಸಂಜಯ್ಯನವರ ಬಿಡದಿಯಲ್ಲಿ ನೀವೂ ಚಂದ್ರವದನೆಯೂ ಈ ವಿಚಾರವಾಗಿ ಸಂಜಯ್ಯನೊಡನೆ ಮಾತನಾಡುತ್ತಿರಲಿಲ್ಲವೆ?

ಜ್ಯೋತಿಲ—ಈ ವಿಚಾರವಾಗಿ ನನಗೆ ಏನೂ ತಿಳಿಯದು. ಮಹಾಸ್ವಾಮಿಯವರ ಕಾರ್ಯದ ಮೇಲೆ ಸಂಜಯ್ಯನವರನ್ನು ಕಾಣುವುದಕ್ಕೆಂದು ಹೋದೆ. ಅಲ್ಲಿ ಚಂದ್ರವದನೆಯಿದ್ದಳು. ನನ್ನ ಮುಖವನ್ನು ನೋಡುತ್ತಲೆ ಹೊರಟುಹೋದಳು.

ಪ್ರಧಾನಿ—ಹಾಗಾದರೆ ಈ ದ್ರೋಹಚಿಂತನೆಯು ನಿಮಗೆ ಹೇಗೆ ತಿಳಿಯಿತು?

ಜ್ಯೋತಿಲ—ಅಲ್ಲಿ ಚಂದ್ರವದನೆಯನ್ನು ಕಂಡು ನನಗೆ ಸ್ವಲ್ಪ ಅನುಮಾನವುಂಟಾಯಿತು. ಅಲ್ಲದೆ ನಿನ್ನೆ ಸನ್ನಿಧಾನದಲ್ಲಿ ಹಾಡುವಾಗ ಏನೋ ಹೆದರಿಕೆಯಿಂದ ಅವಳ ಗಂಟಲು ಕಟ್ಟುತ್ತಿತ್ತು. ಅದರಿಂದ ಅನುಮಾನಪಟ್ಟು ಅತ್ತಲೇ ನೋಡುತಿದೆ. ಅಷ್ಟೇ ಮಹಾಪ್ರಭೂ.

ರಾಜ—ಸುಳ್ಳು. ಈ ತಂತ್ರವು ಮೊದಲು ನಿನಗೆ ತಿಳಿದಿರಬೇಕು. ಬರಿಯ ಊಹೆಯಿಂದ ತಿಳಿದುದಲ್ಲ.

ಜ್ಯೋತಿಲ—ಖಂಡಿತವಾಗಿಯೂ ನಾನು ಕಾಣೆ ಪ್ರಭು.

ರಾಜ—ನಮ್ಮೆದುರಿಗೆ ಮತ್ತೆ ಸುಳ್ಳು ಹೇಳುವಿಯಾ. ಇದ್ದುದನ್ನು ಇದ್ದಹಾಗೆ ಹೇಳು, ನಿನಗೆ ಕ್ಷಮೆಯುಂಟು.

ಜ್ಯೋತಿಲ—ನನ್ನ ಆತ್ಮಸಾಕ್ಷಿಯಾಗಿಯೂ ಹೇಳುತ್ತೇನೆ.

ರಾಜ—ಸಾಕು ನಿನ್ನ ಸಾಕ್ಷಿ. ನಮಗೆ ಸುದ್ದಿ ಬಂದಿದೆ. ಇವನ ವಿಚಾರದಲ್ಲಿ ಏನು ತಿಳಿಯಬಂದಿದೆಯೋ ಹೇಳಿ ಪ್ರಧಾನಿಗಳೆ.

ಪ್ರಧಾನಿ—ಬೆಟ್ಟದ ಒಡೆಯರಿಗೂ ಸಂಜಯ್ಯನಿಗೂ ಕಲೆಯಹಾಕಿದುದು, ಬೆಟ್ಟದ ದೊರೆಗಳನ್ನು ಶ್ರೀರಂಗಪಟ್ಟಣಕ್ಕೆ ಸಂಚುಮಾಡಿ ಕಳು ಹಿಸಿದುದು, ಮಹಾಸ್ವಾಮಿಯವರ ಮೇಲೆ ದ್ರೋಹವನ್ನೆಣಿಸಿ ದುದು ಎಲ್ಲಾ ಇವರ ಕೆಲಸವೆಂದೇ ಸಾಕ್ಷಿಯಾಗಿದೆ.

ರಾಜ—ಇದಕ್ಕೇನು ಹೇಳುತ್ತಿ.

ಜ್ಯೋತಿಲ—ಮಹಾಸ್ವಾಮಿಯವರ ಮೇಲೆ ದ್ರೋಹವನ್ನೆಣಿಸಿದ್ದರೆ ಚಂದ್ರವದನೆಯ ಕೈ ತಡೆಯುತ್ತಿದ್ದೆನೆ ಮಹಾಪ್ರಭು.

ರಾಜ—ಕೆಟ್ಟ ಕೆಲಸವನ್ನು ನೋಡುವುದಕ್ಕೂ ಧೈರ್ಯಬೇಕು ಜ್ಯೋತಿಲ. ಅಲ್ಲದೆ ನಮ್ಮ ವಿಶ್ವಾಸವನ್ನು ಹೆಚ್ಚುಹೆಚ್ಚಾಗಿ ಸಂಪಾದಿಸಿಕೊಳ್ಳುವುದಕ್ಕೆ ಈ ಆಟ ಕಟ್ಟಿರಬಹುದು.

ಜ್ಯೋತಿಲ—ಮಹಾಸ್ವಾಮಿಯವರ ಚಿತ್ತ.

ರಾಜ—ಹಾಗಾದರೆ ತಪ್ಪಿತಸ್ಥನೆಂದು ಒಪ್ಪಿಕೊಳ್ಳುವಿಯೋ.

ಜ್ಯೋತಿಲ—ಇಲ್ಲ ಮಹಾಪ್ರಭು, ತಪ್ಪು ಮಾಡದೆ ಹೇಗೆ ಒಪ್ಪಿ ಕೊಳ್ಳಲಿ.

ಪ್ರಧಾನಿ—ಇದ್ದುದನ್ನು ಇದ್ದಹಾಗೆ ಹೇಳಿಬಿಡು. ಕ್ಷಮಾಶೀಲರಾದ ಮಹಾಪ್ರಭುಗಳು ಮನ್ನಿಸುತ್ತಾರೆ.

(ಜ್ಯೋತಿಲನು ತಲೆಯಲ್ಲಾಡಿಸುವನು.)

ರಾಜ—ನೀನು ಇಂಥವನೆಂದು ನಮಗೆ ತಿಳಿದಿರಲಿಲ್ಲ. ರಾಜದ್ರೋಹ, ಸ್ವಾಮಿದ್ರೋಹ, ಸಾಲದುದಕ್ಕೆ ಈಗ ಸುಳ್ಳಾಡುತ್ತಿರುವಿ. ನಿನಗೆ ಶಿರಚ್ಛೇದನ ಮಾಡಿದರೂ ಸಾಲದು. ಆದರೆ ಸಾಕಿದ ಮಮತೆ ಬಾಧಿಸುತ್ತಿದೆ. ಏನು ಶಿಕ್ಷೆ ಕೊಡಲಿ ನೀನೇ ಹೇಳು.

ಜ್ಯೋತಿಲ—ಶಿಕ್ಷೆ ಮಾಡುವುದಕ್ಕೆ ನನ್ನ ಅಪರಾಧವೇನಿದೆ ಪ್ರಭು.

ರಾಜ—ನಮ್ಮನ್ನು ಕೆರಳಿಸಬೇಡ, ಮುಖ ತೋರಿಸದೆ ಹೊರಟು ಹೋಗು. ದಳವಾಯಿಗಳೆ, ಇವನ ಸರ್ವಸ್ವವನ್ನೂ ಬೊಕ್ಕಸಕ್ಕೆ ಸೇರಿಸಿಕೊಂಡು ರಾಜದ್ರೋಹ ಮಾಡಿದವನೆಂದು ಸಾರುತ್ತಾ ಬೀದಿಬೀದಿಗಳಲ್ಲಿಯೂ ಮೆರವಣಿಗೆ ಮಾಡಿಸಿ ಊರಿನಿಂದಾಚೆಗೆ ಹೊರಡಿಸಿಬಿಡಿ.

ದಳವಾಯಿ—ಅಪ್ಪಣೆ.

## ಸ್ಥಾನ ೫—ಶ್ರೀರಂಗಪಟ್ಟಣದ ಅರಮನೆ

ಜ್ಯೋತಿಲ—ರಂಗಾ !

ರಂಗ—ದೇವರು.

ಜ್ಯೋತಿಲ—ಬೆಟ್ಟದ ದೊರೆಗಳು ಎಲ್ಲಿದಾರೆ ?

ರಂಗ—ಚಂದ್ರಶಾಲ್ಯಾಗೆ ನಂಜಯ್ಯ ನೋರತಾವ ಮಾತಾಡುತಿದ್ದರು. ಈಟರಾಗೇ ಇತ್ತ ದಯಮಾಡಬಹುದು.

ಜ್ಯೋತಿಲ—ನಂಜಯ್ಯ ದೊರೆಗಳೊಂದಿಗೆ ಬಹಳ ಆಪ್ತವಾಗಿದಾರೇನೋ.

ರಂಗ—ಬಲು ಆಪ್ತವಾಗ್ಯೆದಾರೆ ದೇವರು. ಶ್ರೀರಂಗರಾಯರೂ ನಂಜಯ್ಯನೋರೂ ದೊರೆಗಳು ಹೇಳಿದಂಗೆ ಕೇಳುತವ್ರೆ; ವಿಪರೀತ ಉಪಸಾರ.

ಜ್ಯೋತಿಲ—ನನಗೂ ರಾಜಒಡೆಯರಿಗೂ ಮನಸ್ತಾಪವಾದ ವಿಚಾರ ಬೆಟ್ಟದ ದೊರೆಗಳಿಗೆ ತಿಳಿಸಿದೆಯಾ.

ರಂಗ—ತಿಳಿಸಿದೆ ದೇವರು. ಅದುವರೆಗೆ ಆಗಲೇ ಅವರಿಗೆ ತಿಳಿದಿತ್ತು. ಯಾರೋ ಗೂಡಸಾರ ಬಂದು ಹೇಳಿದನಂತೆ. ಮೊದಲು ಕೇಳಿದಾಗ ಬೆಟ್ಟದ ದೊರೆಗಳು ನಂಬಲಿಲ್ಲ. ಆಮ್ಯಾಗೆ ಶ್ರೀರಂಗರಾಯರೇ ಹೇಳುತ್ಲೂನು ಬಲುನೊಂದುಕೊಂಡರಂತೆ.

ಜ್ಯೋತಿಲ—ಸಂತೋಷ. ನನ್ನನ್ನು ಮಹಿಸೂರಿನಿಂದ ಹೊರಡಿಸಿದ ಸುದ್ದಿ ನಂಜಯ್ಯನಿಗೆ ತಿಳಿದಿದೆಯೆ?

ರಂಗ—ಅವರಿಗೂ ತಿಳೀತು. ಆದರೆ ಅದು ಕೇಳುತಲೆ ಉದಾಷ್ಣಮಾಡಿ ಇರಬಹುದು ಎಂದುಬಿಟ್ಟರು.

ಜ್ಯೋತಿಲ—ಒಳ್ಳೇದು. ಶ್ರೀರಂಗರಾಯರಿಗೆ ರಾಜಕುರು ಎದ್ದಿತ್ತಲ್ಲಾ ಈಗ ಹೇಗಿದೆ.

ರಂಗ—ರವ್ವಟು ದಿನ ಬಡವಾಸಿಯಾಗಿತ್ತು. ಈಗ ತಿರುಗ ಮರಕಳಿಸಿಕೊಂಡು ಮೂರು ದಿನದಿಂದ ಹೆಚ್ಚಾಗ್ಯೆತೆ.

ಜ್ಯೋತಿಲ—ಹಾಗಾದರೆ............

ರಂಗ—(ಅಷ್ಟರಲ್ಲಿ) ದೊರೆಗಳು ಬಂದರು ದೇವರು.

ಜ್ಯೋತಿಲ—ನೀನು ಹೋಗು.

(ರಂಗನು ಹೋಗುವನು. ಒಳಗಿನಿಂದ ಬೆಟ್ಟದ ಒಡೆಯರು ಪ್ರವೇಶಿಸುವರು.)

ಬಿ. ಒಡೆಯರು—(ನೋಡಿ) ಯಾರು ಜ್ಯೋತಿಲ !

ಜ್ಯೋತಿಲ—ಮಹಾಪ್ರಭೂ, ಪ್ರಭೂ. (ಕಾಲಮೇಲೆ ಬೀಳುವನು.)

ಬಿ. ಒಡೆಯರು—ಏಳು ಜ್ಯೋತಿಲ, ಏಳು.

ಜ್ಯೋತಿಲ—ನಾನು ನಿರ್ಭಾಗ್ಯ ಪ್ರಭು. ನನ್ನಂತಹವನು ಜೀವಿಸಿರ ಬಾರದು. ಸೇವೆ ಮಾಡಿಸಿಕೊಂಡ ಪ್ರಭುವು ನಿರಾಕರಿಸಿದಮೇಲೆ ಈ ಹಾಳು ಜೀವವನ್ನು ಹೊರಬಾರದು.

ಬಿ. ಒಡೆಯರು—ರಾಜನೂ ಹೀಗೆ ಮಾಡಿದನೆ ?

ಜ್ಯೋತಿಲ—ಅದು ನನ್ನ ಕರ್ಮ ಪ್ರಭು. ಸ್ವಾಮಿಯವರದೇನು ದೋಷ. ಚಾಡಿಕಾರರು ಒತ್ತಿ ಹೇಳಿ ಹೇಳಿ ನನ್ನನ್ನು ಹೊರ ಹೊರಡಿಸುವಂತೆ ಮಾಡಿದರು.

ಬಿ. ಒಡೆಯರು—ನಿನಗೆ ಈ ಶಿಕ್ಷೆ ಮಾಡಬೇಕಾದರೆ ಕಾರಣವೇ ಬೇಡವೆ ?

ಜ್ಯೋತಿಲ—ಕಾರಣವೇನು ಪ್ರಭು. ಯಾರೋ ನನ್ನ ಮೇಲಿನ ದ್ವೇಷ ದಿಂದ ಹಾಗೆ ದೂರು ಹೇಳಿದಾರೆ.

ಬಿ. ಒಡೆಯರು—ನಿನ್ನ ಮೇಲಿನ ದ್ವೇಷದಿಂದಲ್ಲ. ನಮ್ಮ ಮೇಲಿನ ರೋಷ ದಿಂದ ಇಷ್ಟು ಆದುದು. ಒಂದುವೇಳೆ ನಮಗೆ ನೀನು ನೆರವಾಗಿ ದ್ದರೂ ಅದರಲ್ಲಿ ನಿನ್ನ ತಪ್ಪೇನು.

ಜ್ಯೋತಿಲ—ಅದನ್ನು ನಾನು ಹೇಗೆ ಹೇಳಲಿ.

ಬಿ. ಒಡೆಯರು—ನಮ್ಮ ಕೆಲಸಕ್ಕಾಗಿ ನೀನು ಓಡಾಡುತ್ತಿದ್ದೆಯೆಂಬ ಕೋಪವೇನೋ. ಪುನಃ ರಾಜನನ್ನು ಕಂಡಿದ್ದೆಯಾ.

ಜ್ಯೋತಿಲ—ಯಾವ ಮೋರೆಯಿಟ್ಟುಕೊಂಡು ಹೋಗಲಿ ಪ್ರಭು. ನನ್ನ ಸೇವೆಯೊಂದನ್ನೂ ಲೆಕ್ಕಕ್ಕೆ ತರದೆ ಹೇಳಿದವರ ಮಾತು ಕೇಳಿ ನನಗೆ ವನವಾಸ ವಿಧಿಸಿದಮೇಲೆ ಮೋರೆಗೆ ಮಸಿಯಿಟ್ಟುಕೊಂಡು

ಹೋಗುವುದು ತಾನೇ ಹೇಗೆ. ಮೊದಲಿಂದಲೂ ನನ್ನಲ್ಲಿ ಒಂದೇ ವಿಧವಾದ ವಿಶ್ವಾಸವಿಟ್ಟಿದ್ದವರು ತಾವು. ತಮ್ಮ ಸನ್ನಿಧಾನದಲ್ಲಿ ನನ್ನ ಅರಿಕೆಮಾಡಿಕೊಂಡು ಮುಂದಿನ ಅಪ್ಪಣೆ ಪಡೆಯೋಣ ವೆಂದು ಬಂದೆ.

ಬಿ. ಒಡೆಯರು—ಚಿಂತೆಯಿಲ್ಲ. ರಾಜನಿಗಂತೂ ತಿಳುವಳಿಕೆ ಸಾಲದೆ ನಿನ್ನನ್ನು ದೂರಮಾಡಿಕೊಂಡ. ನಾವೂ ಹಾಗೆ ಮಾಡು ತ್ತೇವೆಯೆ. ಇಂದಿನಿಂದ ನಮ್ಮ ಬಳಿಯಿರು.

ಜ್ಯೋತಿಲ—ಮಹಾ ಪ್ರಸಾದ.

ಬಿ. ಒಡೆಯರು—ನಮ್ಮ ಬೆಂಗಾವಲ ಪಡೆಗೆ ನೀನು ಮುಖಂಡನಾಗಿರು.

ಜ್ಯೋತಿಲ—ಪುನಃ ನಾನು ಕತ್ತಿಯನ್ನು ಹಿಡಿಯಲೆ ಪ್ರಭು.

ಬಿ. ಒಡೆಯರು—ಹೌದು. ನಮಗಾಗಿ ನೀನು ಕಾದಬೇಕು.

ಜ್ಯೋತಿಲ—ಅಪ್ಪಣೆ.

ಬಿ. ಒಡೆಯರು—ಬಾ ಹೋಗೋಣ.

## ಸ್ಥಾನ ೧—ಕಾವೇರಿ ತೀರ

(ಬೆಟ್ಟದ ಒಡೆಯರು ಅಕ್ಕಿಹೆಬ್ಬಾಳವನ್ನು ತಮ್ಮ ಕಡೆ ಸೇರಿಸಿಕೊಂಡು ಹಿಂತಿರುಗುತ್ತಾ ದಾರಿಯಲ್ಲಿ ಬೀಡುಬಿಟ್ಟಿರುತ್ತಾರೆ. ರಾತ್ರಿಕಾಲ. ಎಳೆಂಟು ಜನ ಸೈನಿಕರು ಕುಳಿತು ಲಾವಣಿ ಹಾಡುತ್ತಿರುತ್ತಾರೆ.ಲಾವಣಿ ಮುಗಿಯುವ ವೇಳೆಗೆ ಬೆಟ್ಟದ ಚಾಮರಾಜಒಡೆಯರು, ನಂಜಯ್ಯ ಮತ್ತು ವೀರರಾಜಯ್ಯ ಮಾತನಾಡುತ್ತ ಬರುವರು.)

ಬೆ. ಒಡೆಯರು—ಅಲ್ಲಿ ನೋಡಿ ನಂಜಯ್ಯ. ಆಕಾಶವು ಎಷ್ಟು ನಿರ್ಮಲವಾಗಿದೆ.

ನಂಜಯ್ಯ—ಹೌದು. ಒಂದಾದರೂ ಮೋಡವಿಲ್ಲ.

ಬೆ. ಒಡೆಯರು—ಈ ದಿನ ಇನ್ನೂ ಅಷ್ಟಮಿಯಿರಬೇಕು. ಆದರೂ ಬೆಳದಿಂಗಳು ನೋಡಿ ಎಷ್ಟು ಚೆನ್ನಾಗಿದೆ.

ನಂಜಯ್ಯ—ಬೆಳದಿಂಗಳಿನ ಸೊಗಸಿಗಿಂತ ನಿಮ್ಮ ಮನಸ್ಸಿನ ಉಲ್ಲಾಸ ಹೆಚ್ಚಾಗಿದೆ.

ಬೆ. ಒಡೆಯರು—ಅದೂ ನಿಜ ಎನ್ನಿ. ಅಕ್ಕಿಹೆಬ್ಬಾಳ ಇಷ್ಟು ಬೇಗ ನಮ್ಮ ಕೈಸೇರುತ್ತದೆ ಎಂದು ನಮಗೆ ನಂಬಿಕೆಯಿರಲಿಲ್ಲ.

ನಂಜಯ್ಯ—ಇದುವರೆಗೆ ಯಾವ ಯುದ್ಧ ತಾನೆ ನಿಮಗೆ ಪ್ರಯಾಸವಾಗಿದೆ.

ಬೆ. ಒಡೆಯರು—ಆದರೂ ಇದರಷ್ಟು ಸುಲಭವಾಗಿ ನಾವು ಯಾವಾಗಲೂ ಗೆದ್ದಿರಲಿಲ್ಲ. ಬಹುಶಃ ಅವನು ಎಲ್ಲೋ ಹೆದರಿಬಿಟ್ಟಿರಬೇಕು. ಇಲ್ಲದಿದ್ದರೆ ಒಂದು ಮಾತು ಹೇಳಿ ಕಳುಹಿಸುವುದರೊಳಗಾಗಿ ಬಂದು ಶರಣಾಗತನಾಗುತ್ತಿರಲಿಲ್ಲ.

ವೀರ—ನಿಜ, ಹಾಗೆಯೇ ಆಗಿರಬೇಕು.

ನಂಜಯ್ಯ—ಅವನೇನು ಒಡೆಯರೆ ; ಗರ ಎತ್ತಕಡೆ ಬಿದ್ದರೆ ಅತ್ತಕಡೆ ಹೊರಳುತ್ತಾನೆ. ಆದರೂ ಮನಸ್ಸಿಟ್ಟು ಕಾದಿದರೇನೋ ಪ್ರಬಲ ನಾದವನೇ ನಿಜ.

ಬೆ. ಒಡೆಯರು—ಎಂದರೆ ಯುದ್ಧ ಮಾಡಿದ್ದರೆ ಗೆಲ್ಲುತ್ತಿದ್ದನು ಎನ್ನುವಿರಾ?

ನಂಜಯ್ಯ—ಛೆ, ಛೆ! ಅದೆಲ್ಲಿ ಬಂತು. ಅದನ್ನೂ ತಿಳಿದೇ ಅವನು ನಿಮ್ಮ ಮರೆಹೊಕ್ಕಿರುವುದು.

ವೀರ—ನಿಮ್ಮೊಡನೆ ಯುದ್ಧ ಮಾಡಿ ಅವನು ಬದುಕುವುದುಂಟೆ.

ಬೆ. ಒಡೆಯರು—ನಮ್ಮ ವಿಜಯಯಾತ್ರೆಯೆಲ್ಲಾ ಹೀಗೆಯೇ ಸುಸೂತ್ರ ವಾಗಿ ನಡೆಯಬೇಕು ನೋಡಿ. ಇದೂ ಕೂಡಿ ಮೂರು ಕೋಟೆ ಗಳು ನಮಗೆ ಸೇರಿದ ಹಾಗಾಯಿತಲ್ಲವೆ ?

ನಂಜಯ್ಯ—ಹೌದು. ಕನ್ನಂಬಾಡಿ, ಅಕ್ಕಿಹೆಬ್ಬಾಳ, ಕೆಸರೆ ಇವು ನಮಗೆ ಸೇರಿವೆ. ತಳಕಾಡಿನವರಿಗೂ ಉಮ್ಮಚವಾಡಿಯವರಿಗೂ ನಾಳೆ ಸಿರೂಪ ಕಳುಹಿಸಬೇಕು.

ಬೆ. ಒಡೆಯರು—ಆಗಲಿ ಕಳುಹಿಸೋಣ. ಒಬ್ಬೊಬ್ಬರಾಗಿ ಪಾಳೆಯ ಗಾರರೆಲ್ಲ ನಮ್ಮ ಕಡೆ ಸೇರಿಬಿಟ್ಟರೆ ಆಗ ರಾಜನೇನು ಮಾಡುತಾನೆ.

ನಂಜಯ್ಯ—ಮಾಡುವುದೇನು ಸಿಂಹಾಸನವನ್ನು ಬಿಟ್ಟು ಕೊಡು ವುದಷ್ಟೇ ತಾನೇ.

ವೀರ—ಮತ್ತೇನು.

ಬೆ. ಒಡೆಯರು—(ನಗುತ್ತಾ) ಅತ್ತಕಡೆ ಸ್ವಲ್ಪ ದೂರ ಹೋಗೋಣವೆ ? ನದಿಯ ಮೇಲಿನ ಗಾಳಿ ತಣ್ಣಗೆ ಬೀಸುತ್ತಿದೆ, ಬೆಳದಿಂಗಳು, ಹೂವುಗಳ ಪರಿಮಳ. ಇಂತಹ ದಿನ ಇನ್ನಾವಾಗ ಸಿಗಬೇಕು.

ನಂಜಯ್ಯ—ಈ ದಿನ ಬಹಳ ಆಯಾಸವಾಗಿದೆ ಒಡೆಯರೆ. ಮಲಗಿ ನಿದ್ರೆ ಹೋದರೆ ಸೆಟ್ಟಗೆಂದು ಕಾಣುತ್ತದೆ. ಅಲ್ಲದೆ ಬೆಳದಿಂಗಳು ಸಹ ಅಷ್ಟು ಚೆನ್ನಾಗಿಲ್ಲ.

ಬೆ. ಒಡೆಯರು—ಚಿಂತೆಯಿಲ್ಲ ನಂಜಯ್ಯ. ನಿಮಗೆ ಆಯಾಸವಾಗಿದ್ದರೆ ನೀವು ಇಲ್ಲಿಯೇ ಇರಿ. ನಾವು ಮಾತ್ರ ಅಷ್ಟು ದೂರ ಹೋಗಿ ಬರುತ್ತೇವೆ. ನೀವೂ ವಿಶ್ರಮಿಸಿಕೊಳ್ಳಿ ವೀರರಾಜಯ್ಯ.

ನಂಜಯ್ಯ—ಇಲ್ಲ. ನಾನೂ ಬರುತ್ತೇನೆ.

ವೀರ—ನಾನೂ ಬರುತೇನೆ ಹೋಗೋಣ.

ಬೆ. ಒಡೆಯರು—ಸಂತೋಷ ಬನ್ನಿ. ಜ್ಯೋತಿಲ !

ಜ್ಯೋತಿಲ—(ಒಳಗಿನಿಂದ ಬಂದು) ಮಹಾಪ್ರಭು.

ಬೆ. ಒಡೆಯರು—ನಾವು ಮೂರು ಜನವೂ ಸ್ವಲ್ಪ ಸುತ್ತಾಡಿಕೊಂಡು ಬರುತ್ತೇವೆ.

ಜ್ಯೋತಿಲ—ಜೊತೆಯಲ್ಲಿ ಬರಲೆ.

ಬೆ. ಒಡೆಯರು—ಬೇಡ, ಇನ್ನಾರಾದರೂ ಬರುತಾರೆ. ನೀನು ಇಲ್ಲೇ ಎಚ್ಚರವಾಗಿರು.

ಜ್ಯೋತಿಲ—ಅಪ್ಪಣೆ. (ಅವರು ಹೋದಮೇಲೆ) ರಂಗಾ.

ರಂಗ—ದೇವರು !

ಜ್ಯೋತಿಲ—ಹತ್ತಿರ ಯಾರಾದರೂ ಇದಾರೆಯೆ ನೋಡು.

ರಂಗ—(ನೋಡಿಬಂದು) ಯಾರೂ ಇಲ್ಲ ದೇವರು.

ಜ್ಯೋತಿಲ—ಅಡಿಗೆ ಎಲ್ಲಾ ಸಿದ್ಧವಾಯಿತೋ.

ರಂಗ—ಆಗ್ಯೆತೆ ದೇವರು.

ಜ್ಯೋತಿಲ—ಒಳಗೆ ತಂಬಿಗೆಯಲ್ಲಿ ಹಾಲಿಟ್ಟಿದೇನೆ, ತೆಗೆದುಕೊಂಡು ಬಾ.

(ರಂಗ ಹಾಲನ್ನು ತಂದು ಕೊಡುವನು.)

ಜ್ಯೋತಿಲ—(ಅದರಲ್ಲಿ ಪುಡಿಯೊಂದನ್ನು ಬೆರಸಿ ಒಂದು ಕಡ್ಡಿಯಿಂದ ಕಲಕಿ) ಬೆಟ್ಟದ ದೊರೆಗಳು ಊಟಮಾಡುವಾಗ ಅವರಿಗೆ ಕುಡಿಯುವು ದಕ್ಕೆ ಈ ಹಾಲು ಕೊಡು. ಮರೆತು ಬೇರೆ ಯಾವುದನ್ನಾದರೂ ಕೊಟ್ಟೀಯೆ!

ರಂಗ—ಇಲ್ಲ. ಇದನ್ನೇ ಕೊಡುತಿನ್ನಿ.

ಜ್ಯೋತಿಲ—ಹಾಲು ಕುಡಿದ ಒಂದರಕ್ಷಣಕ್ಕೆ ಅವರಿಗೆ ಗಾಢ ನಿದ್ರೆ ಹತ್ತುವುದು. ಬಹಳ ಹೊತ್ತು ಎಚ್ಚರವಾಗುವ ಹಾಗಿಲ್ಲ.

ರಂಗ—ಸರಿ.

ಜ್ಯೋತಿಲ—ಕಾಟ ನಮ್ಮ ಜೊತೆಯಲ್ಲೇ ಇದಾನಲ್ಲವೆ?

ರಂಗ—ಅತ್ತ ಕಡೆ ಐದಾನೆ.

ಜ್ಯೋತಿಲ—ಅವನನ್ನು ಕರೆದು ಹೇಳು. ಒಂದು ಪಾಲಕಿ ಸಿದ್ಧ ಮಾಡಿಟ್ಟುಕೊಂಡಿರಲಿ. ಬೋಯಿಗಳು ನಮ್ಮವರೇ ಕಟ್ಟು ಮಸ್ತಾಗಿರಬೇಕು. ಬೋರಯ್ಯನ್ನ ಮಹಿಸೂರಿಗೆ ಕಳಿಸು; ದೊರೆಗಳ ಹತ್ತಿರಕ್ಕೆ ಮುಂದಾಗಿ ಸುದ್ದಿ ಹೋಗಿರಲಿ. ಇವತ್ತು ರಾತ್ರಿ ಹೇಗಾದರೂ ಮಾಡಿ ಬೆಟ್ಟದ ದೊರೆಗಳನ್ನ ಮಹಿಸೂರಿಗೆ ಸಾಗಿಸದಿದ್ದರೆ ಇನ್ನು ಇಂಥ ದಿನ ಸಿಕ್ಕುವುದು ಬಹಳ ಕಷ್ಟ.

ರಂಗ—ಹೌದು ದೇವರು.

ಜ್ಯೋತಿಲ—ಯಾರು ಮಾತಾಡುತಿರುವುದಲ್ಲಿ.

ರಂಗ—ದೊರೆಗಳು ಬರ್ತ್ತಾ ಇದಾರೆ.

ಜ್ಯೋತಿಲ—ಹೋಗು, ಮೊದಲು ಕಾಟನ್ನ ಕಳಿಸು.

(ರಂಗ ಹೋಗುವನು. ನಂಜಯ್ಯ, ವೀರರಾಜಯ್ಯ ಮತ್ತು ಬೆಟ್ಟದ ಒಡೆಯುರು ನಗುತ್ತಾ ಪ್ರವೇಶಿಸುವರು)

ಬೆ. ಒಡೆಯರು—ಪ್ರಕೃತಿ ಸೌಂದರ್ಯವನ್ನು ನೋಡಿ ನಿಮಗೆ ಮನೆಯ ಜ್ಞಾಪಕ ಬಂತಲ್ಲವೆ ನಂಜಯ್ಯ.

ನಂಜಯ್ಯ—ಹೌದು.

ಬೆ. ಒಡೆಯರು—ಜ್ಯೋತಿಲ !

ಜ್ಯೋತಿಲ—ಮಹಾಪ್ರಭು.

ಬೆ. ಒಡೆಯರು—ಊಟಮಾಡಿದೆಯ ?

ಜ್ಯೋತಿಲ—ಇನ್ನೂ ಇಲ್ಲ ಪ್ರಭು.

ಬೆ. ಒಡೆಯರು—ಊಟಮಾಡಿ ಬಾ ಹೋಗು. ನಿದಾನವಾಗಿ ಕುಳಿತು ಸೊಗಸಾದ ಒಂದು ಕತೆ ಹೇಳುವಿಯಂತೆ.

ಜ್ಯೋತಿಲ—ಮಹಾಸ್ವಾಮಿಯವರಿಗೂ ಆರೋಗಣೆಗೆ ವೇಳೆಯಾಗಿದೆ.

ಬೆ. ಒಡೆಯರು—ಹೌದು. ನಂಜಯ್ಯ, ವೀರರಾಜಯ್ಯ, ತಾವಿನ್ನು ದಯಮಾಡಿ. ನಮ್ಮಿಂದ ಸ್ವಲ್ಪ ಆಲಸ್ಯವಾಯಿತು.

ನಂಜಯ್ಯ—ಏನೂ ಇಲ್ಲ. ಇಂಥಾಕಾಲವಿನ್ನಾವಾಗ ಸಿಗಬೇಕು. ಒಂದು ಮಾತು ಹೇಳುವುದಿದೆ. ಬೆಳಿಗ್ಗೆ ಹೊತ್ತಿಗೆ ಮುಂಚೆ ಪ್ರಯಾಣ ಬೆಳೆಸಬೇಕು. ಊರಿನಲ್ಲಿ ಶ್ರೀರಂಗರಾಯರು ಎದುರು ನೋಡುತ್ತಿರುತ್ತಾರೆ.

ಬೆ. ಒಡೆಯರು—ಆಗಲಿ. ಹೊತ್ತಿಗೆ ಮುಂಚೆ ಬೇಕಾದರೆ ಏಳೋಣ. ಆದರೆ ನದಿಯನ್ನು ದಾಟುವ ಹೊತ್ತಿಗೆ ಸೂರ್ಯನು ಹುಟ್ಟುವಂತಿರಬೇಕು. ಬೆಳಗಿನ ಆ ಕಿರಣಗಳು ನೀರಿನ ಅಲೆಗಳ ಮೇಲೆ ಬೀಳುವಾಗ ಆ ಸೊಬಗನ್ನು ನಾವು ನೋಡಬೇಕು.

ನಂಜಯ್ಯ—ಹಾಗೇ ಆಗಲಿ, ಬನ್ನಿ ವೀರರಾಜಯ್ಯ. (ಒಳಕ್ಕೆ ಹೋಗುವರು. ಬೆಟ್ಟದ ಒಡೆಯರೂ ತಮ್ಮ ಗುಡಾರದೊಳಕ್ಕೆ ಪ್ರವೇಶಿಸುವರು.)

ಜ್ಯೋತಿಲ—ರಂಗಾ! ದೊರೆಗಳ ತಾಟನ್ನು ತೆಗೆದುಕೊಂಡು ಬಾ.

(ರಂಗನು ತಾಟನ್ನೂ ತಂಬಿಗೆಯಲ್ಲಿ ಹಾಲನ್ನೂ ತೆಗೆದುಕೊಂಡು ಬಂದು ಗುಡಾರದೊಳಹೊಕ್ಕು ಮತ್ತೆ ಸ್ವಲ್ಪಹೊತ್ತಿನಲ್ಲಿ ಹೊರಗೆ ಬರುವನು.)

ಕಾಯೋ ಹಣ್ಣೋ?

ರಂಗ—ಹಣ್ಣು.

ಜ್ಯೋತಿಲ—ಸರಿ, ಎಲ್ಲಾ ಸಿದ್ಧಮಾಡು ನಡೆ.

(ಪರದೆಯು ಬಿದ್ದು ಪುನಃ ಮೇಲೆ ಹೋಗುವುದು. ಕತ್ತಲೆ. ಪಾಲಕಿಯಲ್ಲಿ ಬೆಟ್ಟದ ಒಡೆಯರನ್ನು ಮಲಗಿಸಿ ಬೋಯಿಗಳು ಹೊತ್ತಿರುವರು.)

ಜ್ಯೋತಿಲ—ಸದ್ದುಮಾಡದ ಹಾಗೆ ನಡೆಯಬೇಕು. ಒಂದು ಹರಿದಾರಿಯವರೆಗೆ ಒಂದೇ ಉಸಿರಿನಲ್ಲಿ ನಡೆಯಿರಿ. ಅಲ್ಲಿ ರಾವುತರು ಬಂದು ಸಿದ್ಧರಾಗಿದಾರೆ. ಜೋಕೆ. ಸದ್ದುಮಾಡದೆ ಹೋಗಬೇಕು. (ಪಾಲಕಿ ಮುಂದಕ್ಕೆ ಹೋಗುವುದು) ರಂಗಾ!

ರಂಗ—ದೇವರು.

ಜ್ಯೋತಿಲ—ನೀನೂ ಬಂದುಬಿಡು.

ರಂಗ—ನಂಜಯ್ಯನ್ನೂ ಸಾಗಿಸಿಕೊಂಡು ಹೋದರೆ ಮೇಲಲ್ಲವೆ ದೇವರು?

ಜ್ಯೋತಿಲ—ಛೆ, ಛೆ! ಅದು ಕಳ್ಳತನ. ನಮ್ಮೊಡವೆಯನ್ನು ಮಾತ್ರ ಈಗ ನಾವು ಕೊಂಡೊಯ್ಯುತಿದೇವೆ. ನಂಜಯ್ಯನನ್ನು ರಣರಂಗದಲ್ಲಿ ಹಿಡಿದು ಜೋನಿನಲ್ಲಿ ಕೂಡಿ ಮೆರವಣಿಗೆಯಿಂದ ಒಯ್ಯಬೇಕು.

ರಂಗ—ಹೌದು, ನಿಜ. (ಹೋಗುವರು)

(ಒಳಗಡೆ ಭೇರಿಯ ಶಬ್ದವಾಗುವುದು. 'ಓಡಿ ಹೋಗುತ್ತಿದಾರೆ, ಹಿಡಿದುಕೊಳ್ಳಿ ಹಿಡಿದುಕೊಳ್ಳಿ' ಎಂಬ ಧ್ವನಿಯು ಕೇಳಿಬರುವುದು. ಜನರು ಗಾಬರಿಯಿಂದ ಓಡಿ ಬರುವರು.)

ನಂಜಯ್ಯ—(ನಿದ್ದೆಗಣ್ಣಿನಲ್ಲಿ ಬಂದು) ಏನಾಯಿತು, ಏನಾಯಿತು.

ಸೇವಕ—ಪ್ರಭೂ. ಜ್ಯೋತಿಲನಾಯಕ........

ನಂಜಯ್ಯ—ಏನು, ಏನು ಹೇಳು.

ಸೇವಕ—ಬೆಟ್ಟದ ದೊರೆಗಳನ್ನ ಪಾಲಕಿಯಲ್ಲಿ ಮೈಸೂರಿಗೆ ಸಾಗಿಸಿ ಕೊಂಡು ಹೋಗುತಿದಾನೆ.

ನಂಜಯ್ಯ—ಏನೆಂದೆ !

ಸೇವಕ—ಹೌದು ಪ್ರಭು. ಓಡಿಹೋಗುತ್ತೈದಾರೆ ಅಲ್ಲಿ.

ನಂಜಯ್ಯ—(ಮಿಂಚಿನ ವೇಗದಿಂದ ಒಳಗೆ ಹೋಗಿ ನೋಡಿಬಂದು ಕ್ಷಣಕಾಲ ಅಪ್ರತಿಭನಾಗಿದ್ದು) ಏನು ನೋಡುತಿರುವಿರಿ. ಹೇಡಿಗಳೆ, ಓಡಿ, ಓಡಿ, ಅವರನ್ನು ಹಿಡಿದುತನ್ನಿ ನಡೆಯಿರಿ. ಬೆಟ್ಟದ ಒಡೆಯರನ್ನು ಹಿಡಿದುತಂದವರಿಗೆ ಹತ್ತುಸಾವಿರ ಹೊನ್ನು ಕೊಡುತ್ತೇನೆ.

ವೀರ—(ಒಳಗಿಂದ ಬಂದು) ಏನಿದು ನಂಜಯ್ಯ.

ನಂಜಯ್ಯ—ಹುಂ, ಹೊರಡಿ, ತಿಳಿಯಿತೆ. ಜೀವಸಹಿತ ಸಿಕ್ಕದಿದ್ದರೆ ಸತ್ತ ದೇಹವನ್ನೇ ತರಬೇಕು.

(ಸೈನಿಕರು ಓಡುವರು.)

ವೀರ—ಏನಾಯಿತು ನಂಜಯ್ಯ.

ನಂಜಯ್ಯ—ನಿಮ್ಮ ಜ್ಯೋತಿಲನ ತಂತ್ರ ವೀರರಾಜಯ್ಯ. ಆದಿನ ನೀವು ಸಹ ಅವನ ಪರವಾಗಿ ಮಾತನಾಡಿದಿರಲ್ಲಾ ಅದರ ಪರಿಣಾಮ ಇದು. ಬೆಟ್ಟದ ಒಡೆಯರನ್ನು ಮಹಿಸೂರಿಗೆ ಸಾಗಿಸಿಕೊಂಡು ಹೋಗುತ್ತಿದಾನೆ. (ಹಲ್ಲು ಕಡಿದು) ಅವನು ನನ್ನ ಕೈಗೆ ಸಿಕ್ಕಿದರೆ ಸುಚ್ಚುನುರಿಯಾಗಿ ಕೊಂದು ಪಟ್ಟಣದ ಬೀದಿಗಳಲ್ಲಿ ಚೆಲ್ಲಿಸುತ್ತೇನೆ. ನನ್ನ ಕುದುರೆಯೆಲ್ಲಿ, ಬೇಗ ತನ್ನಿ.

ವೀರ—ಬೆಟ್ಟದ ಒಡೆಯರು ಪುನಃ ಮಹಿಸೂರು ಸೇರಿದರೆ ನಮ್ಮ ಆಶೆಯೆಲ್ಲಾ ಮುಗಿದಹಾಗೆಯೇ ಸರಿ.

ನಂಜಯ್ಯ—ಹೌದು, ಊರು ಮುಟ್ಟುವುದಕ್ಕೆ ಮುಂಚೆಯೇ ಅವರನ್ನು ತಡೆಯಬೇಕು. ಅಣ್ಣತಮ್ಮಂದಿರಿಬ್ಬರೂ ಒಮ್ಮೆ ಕಂಡರೆಂದರೆ ಪುನಃ ಕಲೆತುಕೊಳ್ಳುತ್ತಾರೆ ನಮ್ಮ ಪ್ರಯತ್ನವೆಲ್ಲಾ ವ್ಯರ್ಥವಾಗುತ್ತದೆ. ಯಾರೋ ಅಲ್ಲಿ.

(ತೆರೆಯಲ್ಲಿ)—ಕುದುರೆಗಳು ಸಿದ್ಧವಾಗಿವೆ ಪ್ರಭು.

ನಂಜಯ್ಯ—ಬನ್ನಿ ಬನ್ನಿ ವೀರರಾಜಯ್ಯ. (ಸ್ವಲ್ಪ ಮುಂದೆ ಹೋಗಿ) ಹಾ, ಸ್ವಲ್ಪ ನಿಲ್ಲಿ. ನಾನೊಬ್ಬನೇ ಅವರನ್ನು ಹಿಂಬಾಲಿಸುತ್ತೇನೆ. ನೀವು ಬೇರೆ ದಾರಿಯಿಂದ ಮಹಿಸೂರಿಗೆ ಹೋಗಿ.

ವೀರ—ಅಲ್ಲಿ ?

ನಂಜಯ್ಯ—ಒಂದುವೇಳೆ ನಮಗೆ ಸಿಕ್ಕದೆ ಅವರು ಮಹಿಸೂರು ಸೇರಿದರೆ ಅಣ್ಣತಮ್ಮಂದಿರಿಗೆ ಭೇಟಿಯಾಗುವುದಕ್ಕೆ ಮುಂಚೆಯೇ ಪಟ್ಟದ ಒಡೆಯರನ್ನು ನೀವು ಕೊಲ್ಲಿಸಬೇಕು.

ವೀರ—ಏನು !

ನಂಜಯ್ಯ—ಹೌದು. ಅಣ್ಣನನ್ನು ಹಿಡಿದು ತರಿಸಿ ಕೊಲ್ಲಿಸಿದನೆಂದು ಜನರು ರಾಜಒಡೆಯರನ್ನು ದೂರಲಿ. ಅದೂ ನಮ್ಮ ಕೆಲಸಕ್ಕೆ ಸಹಾಯವಾಗುತ್ತದೆ. ಹೇಗೂ ಅಣ್ಣತಮ್ಮಂದಿರು ಒಬ್ಬರನ್ನೊಬ್ಬರು ನೋಡಕೂಡದು. ಇದನ್ನು ಮಾಡುವಿರತಾನೆ.

ವೀರ—ಸಂತೋಷದಿಂದ ಮಾಡುತ್ತೇನೆ.

ನಂಜಯ್ಯ—ಇನ್ನು ಹೊರಡಿ.

## ಸ್ಥಾನ ೨—ಮಹಿಸೂರ ಅರಮನೆ.

ರಾಜಒಡೆಯರು—ಆಮೇಲೆ ಏನಾಯ್ತು ಜ್ಯೋತಿಲ.

ಜ್ಯೋತಿಲ—ಬನ್ನಿಮಂಟಪದ ಬಳಿಗೆ ನಾವು ಬರುವುದರೊಳಗಾಗಿ ನಂಜಯ್ಯನ ಕಡೆಯ ಜನರು ಹಿಂದಿನಿಂದ ಓಡೋಡಿ ಬರುತ್ತಿ

ದ್ದರು. ನಮ್ಮವರು ಇದ್ದವರು ಐವತ್ತೇ ಮಂದಿ ಸವಾರರು. ಆದರೂ ಎದೆಗೊಟ್ಟು ಕಾದುತ್ತಾ ನಿಂತರು. ನಾವು ಸುಸೂತ್ರ ವಾಗಿ ಕೋಟೆಯನ್ನು ಸೇರಿದೆವು.

ರಾಜ—ಅಣ್ಣನವರನ್ನು ಕಂಡು ಬಂದಿರಾ ಪ್ರಧಾನಿಗಳೆ.

ಪ್ರಧಾನಿ—ನೋಡಿದ್ದೆ. ಎದ್ದವರು ಬಿಸಿಲು ಮಂಚ್ಚಿನಲ್ಲಿ ಓಡಾಡು ತ್ತಿದ್ದರು. ಇನ್ನೂ ರಾತ್ರಿಯ ಮಬ್ಬು ಸರಿಯಾಗಿ ಹರಿದಿರಲಿಲ್ಲ.

ರಾಜ—ಮಧ್ಯಾಹ್ನ ಅವರ ಭೇಟಿಯಾಗುವಂತೆ ಮಾಡಿ. ಎಂದಿಗೆ ನೋಡಿಯೇವೋ ಎನಿಸಿದೆ.

ಪ್ರಧಾನಿ—ಅಪ್ಪಣೆ.

ರಾಜ—ನಮ್ಮ ರಾಜ್ಯದ ಹೆಸರನ್ನು ಉಳಿಸಿರುವ ಕೀರ್ತಿ ನಿನ್ನದು ಜ್ಯೋತಿಲ. ಅಂದಾದರೆ ನಮ್ಮ ಜೀವವನ್ನುಳಿಸಿದಿ. ಶತ್ರುಗಳಲ್ಲಿ ಸೇರಿ ಅವರ ತಂತ್ರವನ್ನು ಒಡೆದು ರಾಜ್ಯವನ್ನೂ ನಮ್ಮ ಅಣ್ಣಂದಿ ರನ್ನೂ ಈಗ ಉಳಿಸಿರುವಿ.

ಜ್ಯೋತಿಲ—ಮಹಾಸ್ವಾಮಿಯವರು ನನ್ನನ್ನು ಕೃಪೆಯಿಟ್ಟು ಸಾಕಿದು ದಕ್ಕೆ ಇದೇನೂ ಮಹತ್ಕಾರ್ಯ ಮಾಡಿದಂತಾಗಲಿಲ್ಲ. ಬೀದಿಯ ಭಿಕಾರಿಯಾಗಿದ್ದ ಹುಡುಗನನ್ನು ತಂದು ವಿದ್ಯೆಬುದ್ಧಿ ಹೇಳಿಸಿ ತಮ್ಮ ಅಂತರಂಗದಲ್ಲಿ ಎಡೆಗೊಟ್ಟುದು ಜನ್ಮಜನ್ಮದಲ್ಲಿಯೂ ನಾನು ತೀರಿಸಲಾರದಂತಹ ಉಪಕಾರ.

ರಾಜ—ನೀನು ಹಾಗೆ ಹೇಳಬೇಕಾದ್ದೇ ಸಹಜ. ಆದರೆ, ಆ ದಿನ ನಿನ್ನನ್ನು ರಾಜ್ಯದಿಂದಾಚೆಗೆ ಹೊರಡಿಸಿದಾಗ ನಮ್ಮ ಹೃದಯವು ಹರಿದು ಹೋಗುತ್ತಿತ್ತು. ನಮ್ಮ ಹಿರಿಯ ಮಕ್ಕಳನ್ನು ಹಾಗೆ ಕಳುಹಿಸಿದ್ದರೂ ನಮಗಷ್ಟು ವ್ಯಥೆಯಾಗುತ್ತಿರಲಿಲ್ಲ. ನಿನ್ನಂತಹ

ಸ್ವಾಮಿಭಕ್ತನಿಗೆ ರಾಜಕಾರಣದಲ್ಲಿ ದೊರಕುವ ಮರ್ಯಾದೆ ನೋಡು.

ಜ್ಯೋತಿಲ—ಹೊರಗಿನವರಿಗಾದರೆ ಈ ಉಪಚಾರವೆಲ್ಲ ಹೇಳಬಹುದು ಪ್ರಭು. ನಾನು ತಮ್ಮ ಮಗ.

ರಾಜ—ನಿಜ. ಹಿರಿಯರಲ್ಲಿ ಹಿರಿಯ ಮಗ ನೀನು. ನಮಗೆ ಸಂತೋಷವು ಉಕ್ಕಿ ಬರುತ್ತಿದೆ. ಪ್ರಧಾನಿಗಳೆ, ನಮ್ಮ ಜ್ಯೋತಿಲನು ಮಾಡಿರುವ ಉಪಕಾರಕ್ಕೆ ನಾವೇನು ಕೊಡಬಲ್ಲೆವು ಹೇಳಿ. ಅವನಾಗಿ ಯಾವುದನ್ನೂ ಕೋರುವುದಿಲ್ಲ. ಜ್ಯೋತಿಲ, ಹತ್ತು ಸಾವಿರ ಸೈನ್ಯಕ್ಕೆ ಇಂದಿನಿಂದ ನೀನು ದಳಪತಿಯಾಗಿರುವೆ.

ಜ್ಯೋತಿಲ—ತಮ್ಮ ಸೇವೆ ಮಾಡಲು ನನಗೆ ಇದೇ ಸ್ಥಾನವೇ ಸಾಕು ಪ್ರಭು.

ರಾಜ—ನಾವಾಗಿ ಕೊಟ್ಟುದನ್ನು ನಿರಾಕರಿಸಬೇಡ ಇದರ ಮೇಲೆ. ನಿನ್ನ ಅಪೇಕ್ಷೆಯೇನಿದ್ದರೂ ಹೇಳು.

ಜ್ಯೋತಿಲ—ಅಪೇಕ್ಷೆಯಿದೆ. ಸಂಜಯ್ಯನ ವ್ಯವಸ್ಥೆಯನ್ನು ಮಹಾಸ್ವಾಮಿಯುವರು ನನಗೆ ಬಿಟ್ಟುಕೊಡಬೇಕು. ಮತ್ತು ಇನ್ನೊಂದು; ಶ್ರೀರಂಗಪಟ್ಟಣದ ರತ್ನಸಿಂಹಾಸನದ ಮೇಲೆ ಮಹಾಸ್ವಾಮಿಯವರು ಕುಳಿತಿರುವಾಗ ಬಳಿಯಲ್ಲಿ ನಿಂತಿದ್ದು ದರ್ಶನ ತೆಗೆದುಕೊಳ್ಳಬೇಕು.

ರಾಜ—(ನಗುತ್ತ) ಸಂಜಯ್ಯನ ಶಿಕ್ಷೆ ರಕ್ಷೆಗಳೆರಡನ್ನೂ ನಿನಗೇ ಬಿಡುತ್ತೇವೆ.

(ಸೇವಕನು ಬಿಕ್ಕಿಬಿಕ್ಕಿ ಅಳುತ್ತಾ ಪ್ರವೇಶಿಸುವನು)

ರಾಜ—ಏನದು ಕೇಳಿ.

ಸೇವಕ—ಮಹಾಪ್ರಭೂ.

ಜ್ಯೋತಿಲ—ಏನು ಸಮಾಚಾರ ಕಾಟ.

ಸೇವಕ—ದೊಡ್ಡ ದೊರೆಗಳ ಕಣ್ಣನ್ನು........

ಜ್ಯೋತಿಲ—ಹುಂ. ಏನು ಕಣ್ಣನ್ನು !

ಸೇವಕ—ಸರಸರಾಜಯ್ಯ ತಿವಿದುಬಿಟ್ಟರು

ರಾಜ—ತಿವಿದುಬಿಟ್ಟ !

ಸೇವಕ—ಹೌದು ಮಹಾಪ್ರಭು. ದಳವಾಯಿಗಳು ರಾಜವೈದ್ಯರನ್ನು ಕರೆಸಿದ್ದರು.

ಪ್ರಧಾನಿ—ಅದೋ ದಳವಾಯಿಗಳೂ ಬರುತ್ತಿದಾರೆ.

ರಾಜ—(ಬೇಗ ಮುಂದೆ ಹೋಗಿ) ದಳವಾಯಿಗಳೆ, ಅಣ್ಣನವರು ಹೇಗಿದಾರೆ ಹೇಳಿ. ಅವರಿಗೆ ಏನೂ ಅಪಾಯವಾಗಿಲ್ಲವೆನ್ನಿ, ಸುರಕ್ಷಿತವಾಗಿದಾರೆನ್ನಿ. ಅವರ ವಿಚಾರವಾಗಿ ಕೆಟ್ಟುದನ್ನು ಕೇಳಲಾರೆವು.

(ದಳವಾಯಿ ತಲೆಬಗ್ಗಿಸಿಕೊಂಡು ಸುಮ್ಮನಿರುವನು.)

ಇನ್ನೇನು ಅಶುಭವಾರ್ತೆಯಿದೆ ದಳವಾಯಿಗಳೆ, ಹೇಳಿ.

ದಳವಾಯಿ—ಬೇರೆ ಯಾವ ಅಪಾಯವೂ ಆಗಿಲ್ಲ ಪ್ರಭು. ಆದರೆ, ಅವರ ದೃಷ್ಟಿಯು ಪುನಃ ಬರುವುದು ಕಷ್ಟವೆಂದು ವೈದ್ಯರು ಹೇಳುತಾರೆ.

ರಾಜ—ಕಷ್ಟವೆಂದು ಹೇಳಿದರೆ? ಪ್ರಧಾನಿಗಳೆ, ನೀವು ಹೋಗಿ ವೈದ್ಯರಿಗೆ ಹೇಳಿ. ಅವರೇನು ಕೇಳಿದರೂ ಕೊಡುತ್ತೇವೆ. ಕೊನೆಗೆ ನಮ್ಮ ಕಣ್ಣನ್ನೇ ಬೇಕಾದರೂ ಕೊಡುತ್ತೇವೆ. ಅಣ್ಣನವರ ಕಣ್ಣನ್ನು ಗುಣಪಡಿಸುವ ಹಾಗೆ ಹೇಳಿ. (ಪ್ರಧಾನಿಯು ಹೊರಡುತಿರಲು) ಸ್ವಲ್ಪ ನಿಲ್ಲಿ. ವೈದ್ಯರನ್ನೇ ಇಲ್ಲಿಗೆ ಕರೆತನ್ನಿ ; ನಾವೇ ಸ್ವಯಂ

ಹೇಳುತ್ತೇವೆ. ಆದರೆ ಅಣ್ಣಾನವರನ್ನು ಈಗಲೇ ನಾವು ನೋಡ ಬೇಕು.

ಪ್ರಧಾನಿ—ಅಪ್ಪಣೆ.

ರಾಜ—ದಳವಾಯಿಗಳೆ, ಸರಸರಾಜನಿಗೆ ಅಣ್ಣಾನವರ ಮೇಲೆ ಹೀಗೇಕೆ ಹೊಟ್ಟೆಯುರಿಯುಂಟಾಯಿತು.

ದಳವಾಯಿ—ಅವನು ಬಲ್ಲವನ್ನೂ ಹೇಳಿದ. ಶ್ರೀರಂಗಪಟ್ಟಣದ ಸಂಜಯ್ಯ ಇದಕ್ಕೆ ಮುಖ್ಯಕಾರಣ. ಒಳಗಿಂದೊಳಗೇ ವೀರ ರಾಜಯ್ಯನನ್ನು ಇಲ್ಲಿಗೆ ಕಳಿಸಿ ಇಲ್ಲದ ಆಸೆಗಳನ್ನು ಹುಟ್ಟಿಸಿ ಸರಸರಾಜನನ್ನು ಈ ಕೆಲಸಕ್ಕೆ ನೇಮಿಸಿದಾನೆ.

ರಾಜ—ಇದೂ ಅವನ ಕೆಲಸವೆ ? ಜ್ಯೋತಿಲ. ಆ ನರ ಪಿಶಾಚಿಯಿ ರುವವರೆಗೆ ಮಹಿಸೂರು ಸುರಕ್ಷಿತವಾಗಿರುವ ಹಾಗಿಲ್ಲ. ಶ್ರೀರಂಗ ರಾಯರಿಗೆ ಈಗಲೇ ಒಂದು ಕಾಗದವನ್ನು ಬರೆಸು, ಸಂಜಯ್ಯ ನನ್ನು ನಮಗೊಪ್ಪಿಸದಿದ್ದರೆ ಶ್ರೀರಂಗಪಟ್ಟಣಕ್ಕೆ ನಾವು ಮುತ್ತಿಗೆ ಹಾಕುತ್ತೇವೆ ಎಂದು. ಇದುವರೆಗೆ ವಿಜಯನಗರದ ಹೆಸರು ನೋಡಿಕೊಂಡು ಸುಮ್ಮನಿರಬೇಕಾಯಿತು. ಇನ್ನು ಅದಕ್ಕೆ ಅವಕಾಶವಿಲ್ಲ. ಸಂಜಯ್ಯನೇ ಅವರಿಗೆ ಹೆಚ್ಚಾದರೆ ಯುದ್ಧಕ್ಕೆ ನಿಲ್ಲಬಹುದು. ದಳವಾಯಿಗಳೆ, ಅಣ್ಣಾನವರ ಯೋಗಕ್ಷೇಮವನ್ನು ನೋಡಿಕೊಂಡು ಹಿಂದೆಯೇ ನಾವು ಶ್ರೀರಂಗಪಟ್ಟಣಕ್ಕೆ ಹೋಗ ಬೇಕು. ಸೈನ್ಯವು ಸಿದ್ಧವಾಗಿರಲಿ.

ದಳವಾಯಿ—ಅಪ್ಪಣೆ.

ರಾಜ—ಬಾ ಜ್ಯೋತಿಲ.

## ಸ್ಥಾನ ೩—ಶ್ರೀರಂಗಪಟ್ಟಣದ ಅರಮನೆ

(ಶ್ರೀರಂಗರಾಯರಿಗೆ ರಾಜಕುರು ಬಾಧೆ ಹೆಚ್ಚಾಗಿ ಸರಿಯಾಗಿ ಕುಳಿತುಕೊಳ್ಳಲು ಶಕ್ತಿಯಿಲ್ಲದೆ ಮುಂಭಾಗದ ದಿಂಬಿನ ಮೇಲೆ ಒರಗಿಕೊಂಡು ಕುಳಿತಿರುವರು. ಪ್ರಧಾನಿ ರಾಮಾನುಜಯ್ಯನು ಕೈಯಲ್ಲಿ ಕಾಗದವೊಂದನ್ನು ಹಿಡಿದುಕೊಂಡು ಹತ್ತಿರದಲ್ಲಿ ನಿಂತಿರುವನು.)

ಶ್ರೀರಂಗ—ಯಾರೋ ಅಲ್ಲಿ.

ಸೇವಕ—ಮಹಾಪ್ರಭು.

ಶ್ರೀರಂಗ—ಸಂಜಯ್ಯನನ್ನು ಕರೆದುಕೊಂಡು ಬಾ.

ಸೇವಕ—ಅಪ್ಪಣೆ.

ಶ್ರೀರಂಗ—ಕಾಗದವನ್ನು ತಂದವನು ಎಲ್ಲಿ ಪ್ರಧಾನಿಗಳೇ ?

ರಾಮಾನುಜ—ಅವನು ಇಲ್ಲಿ ನಿಂತುಕೊಳ್ಳಲೇ ಇಲ್ಲ ಪ್ರಭು. ರಾಜ ಒಡೆಯರು ಸೈನ್ಯಸಮೇತರಾಗಿ ಹೊರಡಲು ಸಿದ್ಧರಾಗಿದ್ದರು ಎಂದಷ್ಟು ಮಾತ್ರ ಹೇಳಿ ಹೊರಟುಹೋದನಂತೆ.

ಶ್ರೀರಂಗ—ರಾಜಒಡೆಯರು ಈ ಕೋಟೆಗೆ ಮುತ್ತಿಗೆ ಹಾಕುವರೆಂದು ನೀವು ನಂಬುತ್ತೀರಾ.

ರಾಮಾನುಜ—ನಂಬತಕ್ಕದ್ದೇ ಪ್ರಭು. ಬೇಕಾದಷ್ಟು ಸೈನ್ಯವಿದೆ, ಸಹಾಯವಿದೆ.

ಶ್ರೀರಂಗ—ಹಾಗಾದರೆ ನಮಗೆ ಮುಂದೆ ಯಾವ ದಾರಿ.

ರಾಮಾನುಜ—ಸಂಧಿಮಾಡಿಕೊಳ್ಳುವುದು ಮೇಲು ; ಕೋಶದಲ್ಲಿ ಹಣ ವಿಲ್ಲ ; ಸೈನ್ಯ ಬರಬರುತ್ತಾ ಕ್ಷೀಣವಾಗುತ್ತಿದೆ.

ಶ್ರೀರಂಗ—ಸಂಧಿ ಮಾಡಿಕೊಳ್ಳಬೇಕಾದರೆ ಅವರು ಪತ್ರದಲ್ಲಿ ಬರೆದಿರುವ ಹಾಗೆ ಸಂಜಯ್ಯನನ್ನು ಅವರಿಗೊಪ್ಪಿಸಬೇಕು.

ರಾಮಾನುಜ—ಹೌದು.

ಶ್ರೀರಂಗ—ಅದು ಹೇಗೆ ಮಾಡಲಿ ಪ್ರಧಾನಿಗಳೆ. ೨೦ ವರ್ಷಗಳಿಂದಲೂ ನನ್ನ ಮಗುವಿನಂತೆ ಸಾಕಿ ಈ ದಿನ ಶತ್ರುಗಳ ಬಾಯಿಗೆ ಅವನನ್ನು ನೂಕಲೆ?

ರಾಮಾನುಜ—ಬೇರೆ ದಾರಿಯೇ ಇಲ್ಲವಲ್ಲ.

(ನಂಜಯ್ಯನು ಬರುವನು.)

ಶ್ರೀರಂಗ—ನಂಜಯ್ಯ, ಈ ಪತ್ರವನ್ನು ನೋಡಿ.

ನಂಜಯ್ಯ—(ಓದಿನೋಡಿ) ಸರಿ. ನೀವು ಸುರಕ್ಷಿತವಾಗಿರಬೇಕಾದರೆ ನನ್ನನ್ನು ಅವರಿಗೆ ಬಲಿ ಕೊಡಬೇಕೆಂದು ಒರೆದಿದೆ. ಇದಕ್ಕೇನು ಯೋಚನೆ ಮಾಡಿದಿರಿ.

ಶ್ರೀರಂಗ—ಅದಕ್ಕಾಗಿಯೇ ನಿಮ್ಮನ್ನು ಕರೆಸಿದುದು. ಸ್ವಲ್ಪಕಾಲ ನೀವು ಶ್ರೀರಂಗಪಟ್ಟಣವನ್ನು ಬಿಟ್ಟಿದ್ದರೆ ಉತ್ತಮ.

ನಂಜಯ್ಯ—ಏಕೆ? ಅವನ ಗರ್ಜನೆಗೆ ನೀವು ಹೆದರಿ ಬಿಟ್ಟಿರೇನು?

ಶ್ರೀರಂಗ—ಆ ಮಾತೆಲ್ಲಾ ಈಗ ಬೇಡಿ ನಂಜಯ್ಯ. ನಾವು ಹೇಳಿದ ಹಾಗೆ ಮಾಡಿ.

ನಂಜಯ್ಯ—ಅವನು ಸಾವಿರ ಬರೆದಿರಲಿ ಪ್ರಭೂ. ನೀವು ಅದಕ್ಕೆ ಗಮನಕೊಡಬಾರದು.

ಶ್ರೀರಂಗ—ನಾವು ಹೇಳುವುದು ನಿಮಗೆ ತಿಳಿಯುವುದಿಲ್ಲವೆ?

ನಂಜಯ್ಯ—ತಿಳಿಯಿತು. ನೀವು ಅದನ್ನು ಆಲೋಚಿಸಿ ಹೇಳಿಲ್ಲ. ನಾನೊಬ್ಬನು ಶ್ರೀರಂಗಪಟ್ಟಣದಲ್ಲಿಲ್ಲದಿದ್ದರೆ........

ಶ್ರೀರಂಗ—ಸಾಕು, ಸಾಕು. ನಾವು ಹೇಳಿದಷ್ಟು ಕೆಲಸ ಮಾಡಿ.

ನಂಜಯ್ಯ—ನಿಮ್ಮ ಬೇನೆಯ ನೋವಿನಿಂದ ಹೀಗನಿಸುತ್ತಿದೆ. ಧೈರ್ಯ ಗೆಡಬೇಡಿ. ನಾನಿದೇನೆ; ವೀರರಾಜಯ್ಯನಿದಾನೆ.

ಶ್ರೀರಂಗ—ನಂಜಯ್ಯ, ನನ್ನ ತಾಳ್ಮೆಯನ್ನು ಕಳೆಯಬೇಡಿ. ಶ್ರೀರಂಗ ಪಟ್ಟಣದಲ್ಲಿ ನಿಮಗಿನ್ನು ಎಡೆಯಿಲ್ಲ.

ನಂಜಯ್ಯ—ನಾನು ಹೋಗುವುದಿಲ್ಲವೆಂದರೆ ಏನು ಮಾಡುವಿರಿ.

ಶ್ರೀರಂಗ—ಏನು ! ನಮಗೆ ಪ್ರತಿಘಟಿಸುವುದು !

ನಂಜಯ್ಯ—ಹೌದು. ವಿವೇಕವಿಲ್ಲದೆ ನೀವೊಂದು ಮಾತನ್ನು ಹೇಳಿದ ಮಾತ್ರಕ್ಕೇ ಅದನ್ನು ಪರಿಪಾಲಿಸಬೇಕಾದ ಕೆಲಸವಿಲ್ಲ.

ಶ್ರೀರಂಗ—ಹಾಗಾದರೆ ರಾಜಒಡೆಯರ ಇಚ್ಛೆಯೇ ನೆರವೇರುವುದು. ನಿಮ್ಮನ್ನು ಶತ್ರುಗಳಿಗೊಪ್ಪಿಸಬಾರದೆಂದಿದ್ದೆವು. ನೀವಾಗಿ ಅತ್ತ ಕಡೆ ನುಗ್ಗುತ್ತಿದೀರಿ.

ಮತ್ತೊಬ್ಬ ಸೇವಕ—(ಓಡಿಬಂದು) ಮಹಾಪ್ರಭು. ದೊಡ್ಡದೊಂದು ಸೈನ್ಯ ಮೈಸೂರ ಕಡೆಯಿಂದ ಬರುತಿದೆ.

ರಾಮಾನುಜ—ಎಷ್ಟು ದೂರದಲ್ಲಿದೆ.

ಬಂದವನು—ಸುಮಾರು ಒಂದು ಹರಿದಾರಿಗಿಂತಲೂ ಕಡಿಮೆ ಇರಬಹುದು ಪ್ರಭು.

ರಾಮಾನುಜ—ಒಳ್ಳೆಯದು.

ನಂಜಯ್ಯ—ಈಗಲೂ ಯೋಚಿಸಿ ನೋಡಿ. ಇನ್ನೂ ಅವಕಾಶವಿದೆ. ಇದೇ ಮುತ್ತಿಗೆಯಲ್ಲೇ ರಾಜಒಡೆಯರ ಸೊಕ್ಕಡಗಿಸುತ್ತೇನೆ. ಯುದ್ಧದಲ್ಲಿ ನಿಮಗೇ ಜಯವನ್ನೊದಗಿಸುತ್ತೇನೆ. ಈಗ ಉದಾಶೀನರಾಗಿದ್ದರೆ ಇರುವ ರಾಜ್ಯವನ್ನೂ ಕಳೆದುಕೊಂಡು ಆಜೀವವೂ ಅವನ ಹಂಗಿನಲ್ಲಿರಬೇಕಾಗುವುದು.

ಶ್ರೀರಂಗ—ನಾವೆಲ್ಲಾ ಯೋಚಿಸಿದೇವೆ ನಂಜಯ್ಯ. ಪ್ರಧಾನಿಗಳೆ ! ಕೋಟೆ ಬಾಗಿಲುಗಳನ್ನು ತೆರೆಸಿಬಿಡಿ ; ಯುದ್ಧದ ಗೊಂದಲವು

ಬೇಡ. ಊರಿನಲ್ಲಿ ಮಾತ್ರ ಸೈನಿಕರು ಕೊಳ್ಳೆಹೊಡೆಯುದಂತೆ ಶತ್ರುಗಳೊಡನೆ ಏರ್ಪಾಡು ನಡೆಸಿ. ಇನ್ನು ಹೊರಡಿ.

(ಪ್ರಧಾನಿಯು ಹೊರಡಲೆತ್ನಿಸುವನು.)

ನಂಜಯ್ಯ—ನಿಲ್ಲಿ ಪ್ರಧಾನಿಗಳೆ! ಮುದುಕ ದೊರೆಯು ಹೇಳುವುದು, ನೀವು ಕೇಳುವುದು. ಆ ಅಪ್ಪಣೆಯನ್ನು ಬದಲಾಯಿಸಬೇಕು ಶ್ರೀರಂಗರಾಯರೆ! ನಾನು ಬದುಕಿರುವವರೆಗೆ ಅದಕ್ಕವಕಾಶ ಕೊಡಲಾರೆ.

ಶ್ರೀರಂಗ—ನೀವು ಹೊರಡಿ ಪ್ರಧಾನಿಗಳೆ.

ನಂಜಯ್ಯ—ರಾಮಾನುಜಯ್ಯ! ಒಂದು ಹೆಜ್ಜೆ ಮುಂದಕ್ಕಿಟ್ಟರೆ ಈ ಕಠಾರಿಗೆ ತುತ್ತಾಗುತ್ತೀರಿ ಜೋಕೆ! ಶ್ರೀರಂಗರಾಯರೆ! ನಿಮಗೂ ಇದೇ ಎಚ್ಚರಿಕೆ.

ಶ್ರೀರಂಗ—ನಮ್ಮನ್ನೂ ಬೆದರಿಸುತ್ತೀಯಾ ಪಾಪಿ. ಯಾರೋ ಅಲ್ಲಿ, ಯಾರೋ ಅಲ್ಲಿ.

ನಂಜಯ್ಯ—ಬರಿಯ ಮಾತಲ್ಲ ರಾಯರೆ! (ಎಂದು ಮುಂದೆ ನುಗ್ಗಲೆತ್ನಿಸುವನು. ಅಷ್ಟರಲ್ಲಿ ನಾಲ್ಕುಜನ ಭಲ್ಲೆಯವರು ಬಂದು ಅವನನ್ನು ಮುತ್ತಿಕೊಳ್ಳುವರು.)

ನಂಜಯ್ಯ—(ನೋಡಿ ನಕ್ಕು) ಈಗಲೂ ಎಚ್ಚರಿಸುತ್ತೇನೆ ಶ್ರೀರಂಗರಾಯರೆ!

ರಾಮಾನುಜ—ಆಚೆಗೆ ಕೊಂಡೊಯ್ಯಿರಿ ಇವನನ್ನು.

ಸೇವಕ—(ಓಡಿಬಂದು) ಮಹಾಪ್ರಭು, ಮೈಸೂರಿನ ದಂಡು ನದಿ ದಾಟಿ ಬರುತ್ತಿದೆಯಂತೆ.

ಶ್ರೀರಂಗ—ಪ್ರಧಾನಿಗಳೆ! ನಾವು ಹೇಳಿದಷ್ಟು ಕೆಲಸ ನಡೆಸಿ. ಸುಮ್ಮನೆ ಪ್ರಾಣಿವಧೆ ಬೇಡ. ಇನ್ನೊಂದು ಮಾತು; ಒಂದು ಪಾಲಕಿ

ಕಳಿಸಿಕೊಡಿ. ಬೋಯಿಗಳು ಬಲಶಾಲಿಗಳಾಗಿರಲಿ; ಬಹುದೂರ ಹೋಗಬೇಕು.

ರಾಮಾನುಜ—ಮಹಾಪ್ರಭು.

ಶ್ರೀರಂಗ—ಹೌದು ಪ್ರಧಾನಿಗಳೆ, ಇಲ್ಲಿ ನಿಂತು ಎಲ್ಲವನ್ನೂ ನೋಡ ಲಾರೆವು. ಎಲ್ಲಿಗೆ ಹೋಗುತ್ತೇವೆಂಬ ವಿಚಾರ ಯಾರಿಗೂ ತಿಳಿಯಬೇಕಾದುದಿಲ್ಲ. ಅಥವಾ ತಿಳಿದರೆ ತಾನೇ ಏನು. ತಳ ಕಾಡಿಗೆ ಹೋಗುತ್ತೇವೆ. ನದಿಯನ್ನು ದಾಟಿದ ಮೇಲೆ ನಿಮಗೆ ವರ್ತಮಾನ ಕಳಿಸುತೇವೆ.

ರಾಮಾನುಜ—ಯಾವ ಮನಸಿನಿಂದ ನಾನು ಇದನ್ನು ನಡೆಸಲಿ.

ಶ್ರೀರಂಗ—ಧೈರ್ಯವಾಗಿರಿ ಪ್ರಧಾನಿಗಳೆ. ಇದು ದುಃಖಿಸುವ ಸಮಯ ವಲ್ಲ. ರಾಣಿವಾಸದವರ ರಕ್ಷಣೆ ನಿಮ್ಮ ಮೇಲಿದೆ. ಅವರನ್ನು ಈಗ ಕರೆದೊಯ್ಯಲಾಗುವುದಿಲ್ಲ. ಇನ್ನು ಹೊರಡಿ, ವೇಳೆ ಆಯಿತು. (ಪ್ರಧಾನಿಯು ಹೊರಡುವನು) ಯಾರೋ ಅಲ್ಲಿ. ನಮ್ಮನ್ನು ಚಂದ್ರಶಾಲೆಗೆ ಕರೆದುಕೊಂಡು ಹೋಗು.

(ಸೇವಕನು ಶ್ರೀರಂಗರಾಯರನ್ನು ಮೆಲ್ಲನೆ ಒಳಕ್ಕೆ ಕರೆದೊಯ್ಯುವನು. ಜನರು ಗಾಬರಿಯಿಂದ ಅತ್ತಿತ್ತ ಓಡಾಡುತ್ತಿರುವರು. ಸ್ವಲ್ಪ ಹೊತ್ತಿನ ಮೇಲೆ ರಾಜ ಒಡೆಯರು, ಮಹಿಸೂರ ಪ್ರಧಾನಿ, ರಾಮಾನುಜಯ್ಯಂಗಾರ್ಯ ರಂಗ ಮತ್ತು ಇತರರು ಪ್ರವೇಶಿಸುವರು)

ರಾಜ—ಪ್ರಧಾನಿಗಳೆ, ಶ್ರೀರಂಗರಾಯರ ನಡತೆಯು ನಿಮಗೆ ಅರ್ಥ ವಾಯಿತೆ? ಯುದ್ಧವಿಲ್ಲದೆ ನಾವು ಸರಾಗವಾಗಿ ಪಟ್ಟಣದೊಳಕ್ಕೆ ಬರಲು ಅವಕಾಶಕೊಟ್ಟರು. ಆದರೆ ಅರಮನೆಯೊಳಕ್ಕೆ ಬಂದರೂ ಸಹ ಇನ್ನೂ ಅವರ ಸಮಾಗಮವೇ ಇಲ್ಲ. (ರಾಮಾನುಜಯ್ಯನಿಗೆ) ಈ ಸ್ಥಳದಲ್ಲಿರುವರು ಎಂದಲ್ಲವೆ ನೀವು ಹೇಳಿದುದು?

ರಾಮಾನುಜ—ಹೌದು ಪ್ರಭು.

ರಾಜ—ಎಲ್ಲಿ ತೋರಿಸಿ.

ರಾಮಾನುಜ—ಮಹಾಪ್ರಭುಗಳು ಕ್ಷಮಿಸಬೇಕು. ಸಮಯ ಕಳೆಯ ಬೇಕೆಂದು ಇಷ್ಟು ಹೊತ್ತೂ ತಡಮಾಡಿದೆ. ಶ್ರೀರಂಗರಾಯರು ಪಟ್ಟಣವನ್ನು ತಮಗೆ ಬಿಟ್ಟುಕೊಟ್ಟು ತಳಕಾಡಿಗೆ ಸವಾರಿ ಬೆಳೆಸಿದರು.

ರಾಜ—ಏತಕ್ಕಾಗಿ ?

ರಾಮಾನುಜ—ತಮ್ಮ ಕಡೆಯ ದಿನಗಳನ್ನು ದೇವತಾಸೇವೆಯಲ್ಲಿ ಕಳೆ ಯುತ್ತೇವೆಂದು ಹೇಳಿ ಕಳುಹಿಸಿದಾರೆ.

ರಾಜ—ಮುಂದಾಗಿಯೇ ತಿಳಿಸಿದ್ದರೆ ನಾವು ಅಡ್ಡಿಮಾಡುತಿದ್ದೆವೆ ? ಪಾಪ, ಬೇಸೆಯಿಂದ ನರಳುತ್ತ ಈ ವಯಸ್ಸಿನಲ್ಲಿ ಅವರೊಬ್ಬರೇ ಪ್ರಯಾಣ ಮಾಡುವಂತೆ ಮಾಡಿದಿರಲ್ಲಾ.

ರಾಮಾನುಜ—ಅಪರಾಧ ಮಹಾಪ್ರಭು.

ರಾಜ—ಚಿಂತೆಯಿಲ್ಲ. ದೇವತಾ ಸನ್ನಿಧಿಯಲ್ಲಿಯೇ ನಿಂತಿರಬೇಕೆಂಬ ಇಚ್ಛೆಯು ಅವರಿಗಿದ್ದರೆ ನಾವು ಬೇಡವೆನ್ನುವುದಿಲ್ಲ. ಅವರ ಕುಟುಂಬದವರನ್ನೂ ಆಪ್ತರನ್ನೂ ಸಹ ಮರ್ಯಾದೆಯಿಂದ ಕರೆದುಕೊಂಡು ಹೋಗಿ ಅವರ ಬಳಿ ಸೇರಿಸಿ (ಮಹಿಸೂರು ಪ್ರಧಾನಿಗೆ) ಅವರೆಲ್ಲರೂ ತಮ್ಮ ತಮ್ಮ ಸ್ಥಿತಿಗೆ ತಕ್ಕಂತೆ ಜೀವಿಸಲು ಬೇಕಾದ ಏರ್ಪಾಡುಗಳನ್ನು ನಡೆಸಿಕೊಡಿ ಪ್ರಧಾನಿಗಳೆ.

(ಇಬ್ಬರೂ ಅಪ್ಪಣೆ ಎನ್ನುವರು)

ರಾಜ—ಇಷ್ಟಾಯಿತು, ಜ್ಯೋತಿಲನೆಲ್ಲಿ ? ನಂಜಯ್ಯನೆಲ್ಲಿ ? (ಎಲ್ಲರೂ ಸುಮ್ಮನಿರುವರು) ಯಾರಿಗೂ ತಿಳಿಯದೆ? (ದಳವಾಯಿಯು ಮುಖ ವನ್ನು ಜೋಲು ಹಾಕಿಕೊಂಡು ಪ್ರವೇಶಿಸುವನು.) ದಳವಾಯಿಗಳೆ, ಜ್ಯೋತಿಲನೆಲ್ಲಿ ?

ದಳವಾಯಿ—ಮಹಾಪ್ರಭು. ಕೋಟಿಯು ಸ್ವಾಮಿಯವರ ಕೈ ಸೇರಿದುದನ್ನು ಕಂಡು ಜೀವದಾಸೆಯಿಂದ ನಂಜಯ್ಯ ಓಡಿಹೋಗುತ್ತಿದ್ದ. ಜ್ಯೋತಿಲನಾಯಕರು ಅದನ್ನು ನೋಡಿ ಅವನ ಬೆನ್ನು ಹತ್ತಿದರು.

ರಾಜ—ಆಮೇಲೆ.

ದಳವಾಯಿ—ಇಬ್ಬರೂ ಬಹುದೂರ ಓಡಿದಮೇಲೆ ನಂಜಯ್ಯ ಕೋಟೆಯ ಗೋಡೆ ಹತ್ತಿ ಓಡುವುದಕ್ಕೆ ಪ್ರಾರಂಭಿಸಿದ. ನಾಯಕರು ಅಲ್ಲಿಗೂ ಬಿಡಲಿಲ್ಲ.

ರಾಜ—ಸರಿ.

ದಳವಾಯಿ—ಅದು ಕಂಡು, ನಂಜಯ್ಯ ನದಿಯೊಳಗೆ ಧುಮುಕಿಬಿಟ್ಟ. ಜ್ಯೋತಿಲನಾಯಕರೂ ಸಹ ಹಿಂದುಮುಂದು ನೋಡದೆ ನದಿಯೊಳಕ್ಕೆ ಧುಮುಕಿಬಿಟ್ಟರು.

ರಾಜ—(ಕುತೂಹಲದಿಂದ) ಆಮೇಲೆ!

ದಳವಾಯಿ—ನೀರಿನಲ್ಲೇ ಇಬ್ಬರಿಗೂ ಸ್ವಲ್ಪ ಹೊತ್ತು ಜಗಳವಾಯಿತು. ಹಾಗೆಯೇ ಹೋರಾಡುತ್ತಾ ಇಬ್ಬರೂ ನೀರಿನೊಳಕ್ಕೆ ಮುಳುಗಿದರು.

ರಾಜ—ಮುಂದೆ!

ದಳವಾಯಿ—ನಾನು ಹೇಳಲಾರೆ ಪ್ರಭು. ಮುಳುಗಿದ ಕಡೆಯಲ್ಲಿದ್ದ ನೀರು ಕೆಂಪಿಟ್ಟು ಹೋಯಿತು. ಒಬ್ಬರೂ ಮೇಲಕ್ಕೇಳಲಿಲ್ಲ.

ರಾಜ—ಸಹಾಯಕ್ಕೆ ಯಾರೂ ಹೋಗಲಿಲ್ಲವೆ?

ದಳವಾಯಿ—ದೋಣಿಗಳನ್ನು ತೆಗೆಸಿಕೊಂಡು ಆದಷ್ಟು ಬೇಗನೆ ಜನರನ್ನು ಕಳಿಸಿಕೊಟ್ಟೆವು. ಆದರೆ ಅದುವರೆಗೆ ಕೈಮಿಂಚಿ ಹೋಗಿತ್ತು.

ರಾಜ—ಸಾಕಾಯ್ತು. ಇಷ್ಟು ಲಕ್ಷ ಸೈನ್ಯವಿದ್ದು ಜ್ಯೋತಿಲನು ಅಪಮೃತ್ಯುವಿಗೆ ತುತ್ತಾಗಬೇಕೆ. ಶ್ರೀರಂಗಪಟ್ಟಣದ ವಿಜಯಕ್ಕೆ ಜ್ಯೋತಿಲನು ಬಲಿಯಾಗಬೇಕೆ. ಜ್ಯೋತಿಲ! ನೀನೊಬ್ಬನಿದ್ದರೆ ಅಂತಹ ನೂರುಜನ ಶತ್ರುಗಳು ಸಾಟಿಯಿರುತ್ತಿದ್ದರೆ.

ಪ್ರಧಾನಿ—ಮಹಾಪ್ರಭು. ಅವನು ವೀರ. ವೀರನಂತೆ ಹೋರಾಡಿ ಶತ್ರುವನ್ನು ಕೊಂದು ತಾನೂ ವೀರಸ್ವರ್ಗಕ್ಕೆ ಹೋಗಿದಾನೆ.

ರಾಜ—ಹೌದು. ನಂಜಯ್ಯನ ವ್ಯವಸ್ಥೆಯನ್ನು ತಾನೇ ಮಾಡಬೇಕೆಂದು ಪದೇಪದೇ ಹೇಳುತಿದ್ದ. ಕೊನೆಗೂ ಅದನ್ನು ನಡೆಸಿಯೇಬಿಟ್ಟ. ಆದರೆ ಅವನ ಮತ್ತೊಂದು ಬಯಕೆಯು ನೆರವೇರಲಿಲ್ಲ. ರತ್ನಸಿಂಹಾಸನದ ಮೇಲೆ ನಾವು ಕುಳಿತುಕೊಳ್ಳುವುದನ್ನು ಅವನು ನೋಡಲಿಲ್ಲ.

ರಾಮಾನುಜ—ಮಹಾಸ್ವಾಮಿಯವರು ಪರಿತಾಪಶಮನ ಮಾಡಿಕೊಳ್ಳಬೇಕು. ಆದುದಂತೂ ಆಗಿಹೋಯ್ತು.

ರಾಜ—ಇನ್ನು ಅಂತಹ ಭೃತ್ಯನು ಹುಟ್ಟಲಾರ. ಪ್ರಧಾನಿಗಳೆ! ಇಂದಿನಿಂದ ಇನ್ನೊಂದು ತಿಂಗಳವರೆಗೆ ಜ್ಯೋತಿಲನ ಹೆಸರಿನಲ್ಲಿ ಬಡಬಗ್ಗರಿಗೆ ಅನ್ನದಾನಮಾಡಿ; ದೇವಸ್ಥಾನಗಳಲ್ಲಿ ಆರಾಧನೆಗಳನ್ನು ಮಾಡಿಸಿ. ಅವನ ಆತ್ಮಕ್ಕೆ ಶಾಂತಿಯುಂಟಾಗಲೆಂದು ಪ್ರಜೆಗಳೆಲ್ಲರೂ ಪ್ರಾರ್ಥಿಸುವಂತೆ ನಮ್ಮ ಕೋರಿಕೆಯನ್ನು ತಿಳಿಸಿ.

ಪ್ರಧಾನಿ—ಅಪ್ಪಣೆ.

ರಾಜ—ಜ್ಯೋತಿಲನಂತಹ ಸ್ವಾಮಿಭಕ್ತರ ಸಮಾಧಿಗಳ ಮೇಲೆ ರಾಜ್ಯಗಳು ಬೆಳೆಯಬೇಕಾಗಿದೆ. ವಿಧಿವಿಲಾಸ.

---

# ಅನುಬಂಧ

## ೧. ಉಪಯೋಗಿಸಿಕೊಂಡಿರುವ ಗ್ರಂಥಗಳು

ಕರ್ನಲ್ ಮಾರ್ಕ್ ವಿಲ್ಕ್ಸ್‌ರವರ ಮೈಸೂರುದೇಶದ ಚರಿತ್ರೆ ಭಾಗ I

ಲೂಯಿ ರೈಸ್‌ರವರ ಗೆಜೆಟಿಯರ್ ಭಾಗ I

ಸಿ. ಹಯವದನರಾಯರ ಗೆಜೆಟಿಯರ್ ಭಾಗ II (iv)

ಎಂ. ಶಾಮರಾಯರ ಮೈಸೂರು ದೇಶದ ಚರಿತ್ರೆ.

ಚಿಕ್ಕದೇವರಾಯ ವಂಶಾವಳಿ

ವಂಶರತ್ನಾಕರ

## ೨. ಮೈಸೂರು ಇತಿಹಾಸದ ಆಧಾರದ ಮೇಲೆ ಬರೆದಿರುವ ಗ್ರಂಥಗಳು

ಕಂಠೀರವ ವಿಜಯ— ಬರೆದವರು : ಶ್ರೀಮಾನ್ ಎಂ. ಆರ್. ಶ್ರೀನಿವಾಸ ಮೂರ್ತಿಗಳು

ಮೈಸೂರು ಮಾಣಿಕ್ಯ— ,, ,, ಚಿ. ಸದಾಶಿವಯ್ಯನವರು

ವಿಗಡ ವಿಕ್ರಮರಾಯ—
ಸುಗುಣಗಂಭೀರ— } ,, ,, 'ಸಂಸ'

ರಕ್ತಾಕ್ಷಿ— ,, ,, ಕೆ. ವಿ. ಪುಟ್ಟಪ್ಪನವರು

## ೩. ನಾಟಕವನ್ನಭಿನಯಿಸುವವರಿಗೆರಡು ಮಾತು

ಈ ನಾಟಕವನ್ನೋದುವಾಗ ಸಾಮಾನ್ಯವಾಗಿ ಕಾಣುವಂತೆ ಅಭಿನಯದ ವಿಚಾರವಾಗಿ ನಟರಿಗೆ ಕೊಡತಕ್ಕ ಸೂಚನೆಗಳನ್ನು ಆದಷ್ಟೂ ಕಡಿಮೆಮಾಡಿದೇನೆ. ನಟನು ಅಭಿನಯಿಸುವುದನ್ನು ಕಲಿ

ಯುವುದಷ್ಟೇ ಅಲ್ಲದೆ ಕೆಲವು ವೇಳೆ ಅಭಿನಯಿಸದೆ ಇರುವುದನ್ನೂ ಕಲಿಯಬೇಕು. ಹೀಗೆ ಎಲ್ಲೆಲ್ಲಿ ಅಭಿನಯವು ಅನಾವಶ್ಯಕವೊ ಮತ್ತು ಎಲ್ಲೆಲ್ಲಿ ತಪ್ಪಾಗಿ ಅಭಿನಯಿಸಿದರೆ ದೃಶ್ಯವು ಕೆಡಬಹುದೋ ಅಂತಹ ಕಡೆಗಳಲ್ಲಿ ಮಾತ್ರ ಸೂಚನೆಗಳನ್ನು ಕೊಟ್ಟಿದೆ. ಅಭಿನಯದ ಸೂಚನೆಗಳನ್ನು ಕೊಡುವುದಕ್ಕೂ ಒಂದು ಮೇರೆ ಬೇಕು. ಅಲ್ಲದೆ ನುರಿತ ಚಾಲಕನು ಮತ್ತು ಉತ್ತಮ ನಟರು ಇಲ್ಲದೆ ಕಲಿತ ನಾಟಕವು ಎಷ್ಟು ಸೂಚನೆಗಳನ್ನು ಕೊಟ್ಟಿದ್ದರೂ ಯಶಸ್ವಿಯಾಗಲಾರದು. ಅದರಿಂದ ಅವನ್ನು ಚಾಲಕರ ಮನೋಧರ್ಮಕ್ಕೆ ಬಿಟ್ಟಿದೇನೆ.

ದೃಶ್ಯಗಳನ್ನು ವಿಂಗಡಿಸುವಾಗ ಸಾಧ್ಯವಾದ ಮಟ್ಟಿಗೂ ಈಗಿನ ರಂಗಸ್ಥಳವನ್ನು ದೃಷ್ಟಿಯಲ್ಲಿಟ್ಟುಕೊಂಡಿದೆ. ನಾಟಕದಲ್ಲಿ ಚಿಕ್ಕ ದೃಶ್ಯವೊಂದಾದ ಮೇಲೆ ಹೆಚ್ಚು ಕಾಲ ತೆಗೆದುಕೊಳ್ಳುವ ಅಥವಾ ಹೆಚ್ಚು ರಂಗಸಿದ್ಧತೆಯನ್ನು ಬಯಸುವ ದೃಶ್ಯ ಮತ್ತೆ ಚಿಕ್ಕ ದೃಶ್ಯ ಈ ಕ್ರಮದಲ್ಲಿ ನಾಟಕವನ್ನು ಬರೆದಿದ್ದರೆ ರಂಗಸಿದ್ಧತೆಗಾಗಿ ಪ್ರೇಕ್ಷಕರಿಗೆ ಬೇಸರವಾಗುವಷ್ಟು ಕಾಲ ವಿಳಂಬಮಾಡದೆ ಮತ್ತು ನಾಟಕಾಭಿನಯದಲ್ಲಿ ಮಧ್ಯೆಮಧ್ಯೆ ಹೆಚ್ಚು ವಿರಾಮವನ್ನು ಕೊಟ್ಟು ಅದರ ಸವಿಯನ್ನು ಕೆಡಿಸದೆ ಇರಲು ಅನುಕೂಲವಾಗುತ್ತದೆ. ಈ ನಾಟಕದಲ್ಲಿ ಇಂತಹ ಕ್ರಮವನ್ನನುಸರಿಸಲು ಪ್ರಯತ್ನಪಟ್ಟಿದೇನೆ. ಮೊದಲನೆಯ ಅಂಕದಲ್ಲಿ ಮೊದಲನೆಯ ದೃಶ್ಯವು ಚಿಕ್ಕದು. ಅದೊಂದು ಬೀದಿ. ಎರಡನೆಯದು ರಾಜನ ಆಸ್ಥಾನ. ಮೂರನೆಯದು ಮತ್ತೆ ಚಿಕ್ಕ ದೃಶ್ಯ. ಅರಮನೆಯ ಒಂದು ಭಾಗ. ಈಗಿರುವ ರಂಗಸ್ಥಳದ ಅನುಕೂಲತೆಯಂತೆ ಇದು ಆಸ್ಥಾನದ ದೃಶ್ಯವು ಮುಗಿದುದನ್ನು ಸೂಚಿಸುವ ಒಂದು ಪರದೆ ಮಾತ್ರ. ಎರಡನೆಯ ಅಂಕದಲ್ಲಿ ಮೊದಲನೆಯ

ದೃಶ್ಯವು ಅಷ್ಟು ದೊಡ್ಡದೂ ಅಲ್ಲ ಚಿಕ್ಕದೂ ಅಲ್ಲ. ಇದು ಅರ್ಧ ರಂಗಸ್ಥಳವನ್ನಾಕ್ರಮಿಸುತ್ತದೆ. ದೊರೆಯು ಬಂದು ಕುಳಿತುಕೊಳ್ಳಲು ಒಂದು ಪೀಠ ಮತ್ತು ತಿವಾಸಿಗಳು; ಅತ್ತಿತ್ತ ಒಂದೆರಡು ಪೀಠಗಳು (ಈ ಪೀಠಗಳು ಬರಿಯ ಮೆತ್ತೆಗಳು). ಎರಡನೆಯ ದೃಶ್ಯವು ಇನ್ನು ಸ್ವಲ್ಪ ಚಿಕ್ಕದಾಗಿರಬಹುದು. ಅದರಲ್ಲಿಯೂ ಹಾಗೆಯೇ; ಸ್ಥಾನ ಭೇದವನ್ನು ಸೂಚಿಸುವ ಬೇರೆ ಪರದೆ, ಮೂರು ನಾಲ್ಕು ಪೀಠಗಳು. ಈ ಎರಡು ದೃಶ್ಯಗಳನ್ನೂ ಅಭಿನಯಿಸುವ ವೇಳೆಗೆ ಮೂರನೆಯ ದೃಶ್ಯಕ್ಕೆ ಸಿದ್ಧತೆಯನ್ನು ಮಾಡಿಕೊಳ್ಳಬಹುದು. ಇದು ಪೂರ್ತಾ ರಂಗಸ್ಥಳವನ್ನು ಆಕ್ರಮಿಸುತ್ತದೆ. ಇದಾದ ಮೇಲೆ ನಾಲ್ಕು ಐದ ನೆಯ ದೃಶ್ಯಗಳು ಮತ್ತೆ ಚಿಕ್ಕವು. ಒಂದು ಅರ್ಧ ರಂಗಸ್ಥಳದಲ್ಲಿ ನಡೆಯುವುದು ಮತ್ತೊಂದು ಇನ್ನೂ ಮುಂದೆ ನಡೆಯುವುದು. ಈ ದೃಶ್ಯಕ್ಕೆ ಒಂದನೆಯ ಅಂಕದ ಮೂರನೆಯ ದೃಶ್ಯದ ಪರದೆಯನ್ನು ಬಿಟ್ಟಿದ್ದರೆ ಸಾಕು. ಮೂರನೆಯ ಅಂಕದ ಮೊದಲನೆಯ ದೃಶ್ಯವು ಮತ್ತೆ ದೊಡ್ಡದು. ಚೈತನ್ಯವಿರುವವರು ತಮ್ಮ ನೈಪುಣ್ಯವನ್ನು ಇಲ್ಲಿ ತೋರಿಸಬಹುದು. ಸೈನಿಕರು ಲಾವಣಿ ಹಾಡುತ್ತಿರುವಾಗ ಬೆಳ ದಿಂಗಳು, ಬೆಟ್ಟದ ಒಡೆಯರು ಗುಡಾರದೊಳಕ್ಕೆ ಹೋಗುವಾಗ್ಯೆ ಬೆಳದಿಂಗಳು ಮುಳುಗಿ ಕತ್ತಲೆಯು ಕವಿಯುತಿರುತ್ತದೆ. ಅನಂತರ ಸ್ವಲ್ಪ ಹೊತ್ತಿನ ಮೇಲೆ ಅವರನ್ನು ಕೊಂಡೊಯ್ಯುವಾಗ ರಂಗಸ್ಥಳ ದಲ್ಲಿ ಸಂಪೂರ್ಣವಾಗಿ ಕತ್ತಲೆ. ಆದರೆ ನಟರಮೇಲೆ ಮಾತ್ರ ತೆಳ್ಳಗೆ ಬೆಳಕು ಬಿದ್ದಿರಬೇಕು. ಎರಡನೆಯ ದೃಶ್ಯವು ಚಿಕ್ಕದು. ಮೈಸೂರಿನ ಅರಮನೆಯ ಒಂದು ಭಾಗದಲ್ಲಿ ನಡೆಯುವುದು. ಇದಕ್ಕೆ ಹೆಚ್ಚು ಸಿದ್ಧತೆ ಬೇಕಿಲ್ಲ. ಕಡೆಯ ದೃಶ್ಯವು ದೊಡ್ಡದು. ಈ ಅನ್ವಯದಲ್ಲಿ ದೃಶ್ಯಗಳನ್ನು ಜೋಡಿಸಿದೆ.

